**ಸರ್ಕಾರದ ಆದೇಶ ಸಂಖ್ಯೆ ಕಂಇ 25 ಎಂವಿಎಸ್ 2004, ಬೆಂಗಳೂರು, ದಿನಾಂಕ: 29ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲ್ಮನವಿದಾರರು ಎತ್ತಿರುವ ವಾದಗಳನ್ನು ಒಪ್ಪಲು ಸಾಧ್ಯವಿಲ್ಲ. ಆದಾಗ್ಯೂ ಅವರು ಎಸಗಿದ ದುರ್ನಡತೆಯ ತೀವ್ರತೆ ಮತ್ತು ವಿಧಿಸಿದ ದಂಡನೆಯು ಸಮ ಪ್ರಮಾಣದಲ್ಲಿ ಇ ಲ್ಲದಿರುವುದನ್ನು ಮನಗಂಡು ಜಿಲ್ಲಾಧಿಕಾರಿಗಳು ಅವರ ದಿನಾಂಕ 12.6.2002 ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಮೇಲ್ಮನವಿದಾರರ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿದು ಆದೇಶಿಸಿ ಸದರಿ ಮೇಲ್ಮನವಿಯನ್ನು ಇ ತ್ಯರ್ಥ ಪಡಿಸಲಾಗಿದೆ.

ಈ ಆದೇಶವನ್ನು ಉಕ್ತಲೇಖಿಸಿ ಬೆರಳಚ್ಚು ಮಾಡಿಸಿ ದಿನಾಂಕ 29-6-2004 ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲೂಕೋಸ್ ವಲ್ಲತರೈ**

ಪಿ.ಆರ್. 730

ಸರ್ಕಾರದ ಕಾರ್ಯದರ್ಶಿ, ಕಂದಾಯ ಇ ಲಾಖೆ

**ಆರ್ಥಿಕ ಸಚಿವಾಲಯ**

**ವಿಷಯ :** ಸರ್ಕಾರದ ವೆಚ್ಚಗಳಲ್ಲಿ ಮಿತವ್ಯಯ ಕ್ರಮಗಳು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ ಆಇ 3 ಬಿಇಎಂ 2001, ದಿನಾಂಕ 17–10–2003.

2. ಸರ್ಕಾರದ ಆದೇಶ ಸಂಖ್ಯೆ ಆಇ 2 ಬಿಇಎಂ 2003, ದಿನಾಂಕ 29–9–2003.

**ಪ್ರಸ್ತಾವನೆ:**

ದಿನಾಂಕ 17–10–2001ರ ಸರ್ಕಾರಿ ಆದೇಶದಲ್ಲಿ ಯೋಜನೆಗೆ ಹೆಚ್ಚು ಹಣವನ್ನು ಒದಗಿಸುವ ಸಲುವಾಗಿ ಸಂಪನ್ಮೂಲಗಳನ್ನು ಸಂರಕ್ಷಿಸಲು ಮತ್ತು ಯೋಜನೇತರ ವೆಚ್ಚದಲ್ಲಿ ಮಿತವ್ಯಯವನ್ನು ಸಾಧಿಸಲು ಒಂದು ಸಮಗ್ರ ಮಿತವ್ಯಯ ಆದೇಶವನ್ನು ಹೊರಡಿಸಲಾಯಿತು.

ದಿನಾಂಕ 17–10–2001ರ ಸರ್ಕಾರದ ಆದೇಶದಲ್ಲಿ ವಿಧಿಸಿದ ಮಿತವ್ಯಯ ಕ್ರಮಗಳನ್ನೂ ಒಳಗೊಂಡಂತೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 2 ಬಿಇಎಂ 2003, ದಿನಾಂಕ 29–9–2003ರಲ್ಲಿ ಮತ್ತಷ್ಟು ಮಿತವ್ಯಯ ಕ್ರಮಗಳನ್ನು ಜಾರಿಗೊಳಿಸಲಾಯಿತು. ರಾಜ್ಯದಲ್ಲಿ ಸತತ ಮೂರು ವರ್ಷಗಳ ಕಾಲ ಸಂಭವಿಸಿದ ಬರಗಾಲವು ಹಿಂದೆಂದೂ ಇದ್ದಿಲ್ಲದಂತಹ ತೀವ್ರ ತರವಾದ ಯಾತನೆ ಮತ್ತು ಕಷ್ಟವನ್ನು ರೈತರಿಗೆ ಉಂಟು ಮಾಡಿದ್ದರಿಂದ ರೈತರಿಗೆ ಪರಿಹಾರ ಕ್ರಮಗಳನ್ನು ಕೈಗೊಳ್ಳುವ ಸಲುವಾಗಿ ಹೆಚ್ಚು ನಿಧಿ ದೊರೆಯುವಂತೆ ಮಾಡಲು 2003–2004ನೇ ಆರ್ಥಿಕ ವರ್ಷದಲ್ಲಿ ಈ ಮಿತವ್ಯಯ ಕ್ರಮಗಳನ್ನು ಜಾರಿಗೊಳಿಸಲಾಯಿತು.

ಈ ಮಿತವ್ಯಯ ಆದೇಶವು 2004–2005ನೇ ಸಾಲಿಗೂ ಅನ್ವಯಿಸುವ / ಮುಂದುವರೆಸುವ ಬಗ್ಗೆ ಸ್ಪಷ್ಟೀಕರಣವನ್ನು ಕೋರಿದ್ದರ ಹಿನ್ನೆಲೆಯಲ್ಲಿ ಸರ್ಕಾರವು ಬರಗಾಲಕ್ಕೆ ಸಂಬಂಧಿಸಿದ ಮಿತವ್ಯಯ ಕ್ರಮಗಳನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 2 ಬಿಇಎಂ 2003 ಬೆಂಗಳೂರು, ದಿನಾಂಕ 5ನೇ ಜುಲೈ 2004**

ಅ) ಆಯವ್ಯಯದಲ್ಲಿ ಸಾಕಷ್ಟು ಅವಕಾಶ ಮಾಡಿದ್ದಲ್ಲಿ ಸಾಮಗ್ರಿ ಮತ್ತು ದಾಸ್ತಾನು/ಪೀಠೋಪಕರಣಗಳು ಇವುಗಳನ್ನು ಖರೀದಿಸಬಹುದು.

ಆ) ವಿವರಣಾ ಶೀರ್ಷಿಕೆ–125–ಆಧುನೀಕರಣ ಇದರ ಮೇಲಿನ ಸ್ಥಗಿತವನ್ನು ಹಿಂತೆಗೆದುಕೊಳ್ಳಲಾಗಿದೆ. ಆಯವ್ಯಯದಲ್ಲಿ ಅವಕಾಶವಿದ್ದಲ್ಲಿ ಇಲಾಖೆಗಳು ಆಧುನೀಕರಣಕ್ಕಾಗಿ ವೆಚ್ಚವನ್ನು ಮಾಡಬಹುದಾಗಿದೆ.

ಇ) ಪ್ರಯಾಣದ ಮೇಲಿನ ವೆಚ್ಚಗಳನ್ನು ಆಯವ್ಯಯದಲ್ಲಿನ ಅವಕಾಶಕ್ಕೆ ಸೀಮಿತಗೊಳಿಸಿ, ವೆಚ್ಚ ಮಾಡಬಹುದಾಗಿದೆ.

ಈ) ಪ್ರಸ್ತುತ ಜಾರಿಯಲ್ಲಿರುವ ನಿಯಮಗಳ ಅನ್ವಯಕ್ಕೆ ಒಳಪಟ್ಟು, ರಾಜ್ಯದ ಹೊರಗೆ ವಿಮಾನಯಾನದ ಮೇಲಿನ ನಿರ್ಬಂಧವನ್ನು ಹಿಂತೆಗೆದುಕೊಳ್ಳಲಾಗಿದೆ.

ಉ) ಪೆಟ್ರೋಲ್, ತೈಲ, ಲೂಬ್ರಿಕೆಂಟ್ಸ್ ಹಾಗೂ ಲೇಖನ ಸಾಮಾಗ್ರಿಗಳಿಗೆ ಆಯವ್ಯಯದಲ್ಲಿ ಅವಕಾಶ ಮಾಡಿದ್ದಲ್ಲಿ ವೆಚ್ಚ ಮಾಡಬಹುದಾಗಿದೆ.

ಊ) ಹೊಸ ವಾಹನಗಳ ಖರೀದಿ ಮೇಲಣ ಪೂರ್ಣ ನಿಷೇಧವು ಮುಂದುವರೆಯುತ್ತದೆ.

ಋ) ನೇರ ನೇಮಕಾತಿ ಮೂಲಕ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ ಮತ್ತು ಭರ್ತಿ ಮೇಲಿನ ನಿಷೇದ ಮುಂದುವರೆಯಲಿದೆ. ಎಲ್ಲಾ ಮುಂಬಡ್ತಿ, ನೇಮಕಾತಿ ಮತ್ತು ಯಾವುದೇ ರೀತಿಯ ಹುದ್ದೆಗಳ ಸೃಜನೆಗೆ ಆರ್ಥಿಕ ಇಲಾಖೆಯ ಪೂರ್ವಾನುಮತಿ ಪಡೆಯತಕ್ಕದ್ದು. ಹುದ್ದೆಗಳ ಸೃಜನೆ, ನೇಮಕಾತಿ ಮತ್ತು ಮುಂಬಡ್ತಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 2 ಈಕಾಅ 2004, ದಿನಾಂಕ 1–3–2004 ಇದರಲ್ಲಿ ಸೂಚಿಸಿದಂತೆ ಅಷ್ಟೇ ಪ್ರಮಾಣದಲ್ಲಿ ಹುದ್ದೆಗಳನ್ನು ರದ್ದು ಮಾಡದಿದ್ದಲ್ಲಿ ಪ್ರಸ್ತಾವನೆಗಳನ್ನು ಪರಿಗಣಿಸಲಾಗುವುದಿಲ್ಲ.

ೠ) ಹುದ್ದೆಗಳ ನೇಮಕಾತಿ / ಸೃಜನೆ ಮತ್ತು ಭರ್ತಿ ಮೇಲಿನ ನಿಷೇದವು ಸಹಾಯಾನುದಾನ ಸಂಸ್ಥೆಗಳಿಗೂ ಅನ್ವಯವಾಗಲಿದೆ.

ಎ) ಸಹಾಯಾನುದಾನ ಪಡೆಯುವ ಸಂಸ್ಥೆಗಳಲ್ಲಿ ಹಾಲಿ ಖಾಲಿಯಿರುವ ಹುದ್ದೆಗಳು ಅಥವಾ ಖಾಲಿ ಆಗಬಹುದಾದ ಹುದ್ದೆಗಳನ್ನು ಮುಂದಿನ ಆದೇಶದವರೆಗೆ ಖಾಲಿ ಇಡತಕ್ಕದ್ದು.

ಈ ಎಲ್ಲಾ ಆರ್ಥಿಕ ಮಿತವ್ಯಯ ಕ್ರಮಗಳು ಅವಶ್ಯವಿರುವ ಬದಲಾವಣೆಗಳೊಂದಿಗೆ ಜಿಲ್ಲಾ ಪಂಚಾಯತ್‌ಗಳು, ಅನುದಾನಿತ ಸಂಸ್ಥೆಗಳು, ನಗರ ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ವಲಯ ಉದ್ದಿಮೆಗಳು, ರಾಜ್ಯ ಸ್ವಾಯತ್ತ ಸಂಸ್ಥೆಗಳು ಮತ್ತು ನಿಗಮಗಳಿಗೂ ಅನ್ವಯವಾಗುತ್ತದೆ.

ಆರ್ಥಿಕ ಮಿತವ್ಯಯಗಳ ಪರಿಣಾಮದ ಬಗ್ಗೆ ಮೌಲ್ಯಮಾಪನ ಮಾಡಲು ಆರ್ಥಿಕ ಇಲಾಖೆಯು ಕಾರ್ಯಾಚರಣಾ ವೆಚ್ಚಕ್ಕೆ ಸಂಬಂಧಿಸಿದಂತೆ ಮಾಹಿತಿ ನಿರ್ಮಿಸುವ ಕಾರ್ಯವನ್ನು ಪ್ರಾರಂಭಿಸಿದೆ. ಎಲ್ಲಾ ಇಲಾಖೆಗಳು ಇದಕ್ಕೆ ಸಂಬಂಧಿಸಿದ ಪ್ರಶ್ನಾವಳಿಗೆ ತ್ವರಿತವಾಗಿ ಮತ್ತು ನಿಖರವಾಗಿ ಪ್ರತಿಕ್ರಿಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಪಿ. ನರಸಿಂಗ ರಾವ್**

ಪಿ.ಆರ್. 731 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣಾ ಮತ್ತು ಗಣಕ ಕೋಶ)

## ಕಾನೂನು ಸಚಿವಾಲಯ

**ವಿಷಯ:** ಶ್ರೀ ರುದ್ರಪ್ಪ ಬಸಪ್ಪ ಕೂಡ್ಲಿ, ನೋಟರಿ, ಹುಬ್ಬಳ್ಳಿ, ಇವರ ರಾಜೀನಾಮೆ ಅಂಗೀಕರಿಸುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 210 ಎಲ್‌ಸಿಎಲ್ 99, ದಿನಾಂಕ: 04.05.2000.

2. ಶ್ರೀ ಆರ್.ಬಿ. ಕೂಡ್ಲಿ, ನೋಟರಿ, ಹುಬ್ಬಳ್ಳಿ ಇವರ ಮನವಿ ದಿನಾಂಕ: 25.02.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 04.05.2000ರ ಸರ್ಕಾರಿ ಆದೇಶದಲ್ಲಿ ಶ್ರೀ ರುದ್ರಪ್ಪ ಬಸಪ್ಪ ಕೂಡ್ಲಿ, ವಕೀಲರು ಹುಬ್ಬಳ್ಳಿ ಇವರನ್ನು ಧಾರವಾಡ-ಹುಬ್ಬಳ್ಳಿ ನಗರ ಸಭಾ ತಾಲ್ಲೂಕಿಗೆ ನೋಟರಿಯಾಗಿ ನೇಮಕ ಮಾಡಲಾಗಿತ್ತು.

ಮೇಲಿನ ಕ್ರಮಾಂಕ (2) ದಿನಾಂಕ: 25.02.2004ರ ಮನವಿಯಲ್ಲಿ ಶ್ರೀ ರುದ್ರಪ್ಪ ಬಸಪ್ಪ ಕೂಡ್ಲಿ ಇವರು ನೋಟರಿ ಹುದ್ದೆಗೆ ದಿನಾಂಕ: 25.02.2004 ರಂದು ರಾಜಿನಾಮೆ ನೀಡುತ್ತಿರುವುದಾಗಿ ತಿಳಿಸಿ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 3ನೇ ಜುಲೈ 2004**

ಶ್ರೀ ರುದ್ರಪ್ಪ ಬಸಪ್ಪ ಕೂಡ್ಲಿ, ನೋಟರಿ, ಹುಬ್ಬಳ್ಳಿ-ಧಾರವಾಡ ನಗರ ಸಭಾ, ಧಾರವಾಡ ಜಿಲ್ಲೆ ಇವರು ನೋಟರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 25.02.2004 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ರಿಜಿಸ್ಟರಿನಿಂದ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಈಶ್ವರ ಪ್ರಸಾದ್**

ಪಿ.ಆರ್. 733 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, ಆಡಳಿತ-2.

## ಆರ್ಥಿಕ ಸಚಿವಾಲಯ

**ವಿಷಯ:** ಸಣ್ಣ ಉಳಿತಾಯ 2004-05ನೇ ಸಾಲಿನಲ್ಲಿ ಪ್ರೋತ್ಸಾಹಕ ಯೋಜನೆಗಳನ್ನು ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆಇ 44 ಸಉಲಾ 2003, ದಿನಾಂಕ: 29.09.2003.

2. ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ಇವರಿಂದ ಬಂದ ಪತ್ರ ಸಂಖ್ಯೆ: ಸಉಪ್ರ(2)107/2003-04, ದಿನಾಂಕ: 24.04.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2003-04ನೇ ಸಾಲಿಗೆ ವಿವಿಧ ಸಣ್ಣ ಉಳಿತಾಯ ಪ್ರೋತ್ಸಾಹಕ ಬಹುಮಾನ ಯೋಜನೆಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ಇವರು 2004-05ನೇ ಸಾಲಿನಲ್ಲಿ ಸಣ್ಣ ಉಳಿತಾಯ ಸಂಗ್ರಹಣೆಯಿಂದ ರೂ.2618 ಕೋಟಿಗಳ ಸಂಪನ್ಮೂಲವನ್ನು ನಿರೀಕ್ಷಿಸಿದ್ದು, ಈ ಬೃಹತ್ ಗುರಿಯನ್ನು ಸಾಧಿಸಬೇಕಾದರೆ ಒಟ್ಟು ರೂ.7848 ಕೋಟಿ ಹಾಗೂ ನಿವ್ವಳ ರೂ.2616 ಕೋಟಿಗಳನ್ನು ಸಂಗ್ರಹಿಸಬೇಕಾಗಿರುತ್ತದೆಂದು ತಿಳಿಸುತ್ತಾ ಸಣ್ಣ ಉಳಿತಾಯ ಸಂಗ್ರಹಣೆಯನ್ನು ಆಕರ್ಷಿಸಲು ವಿವಿಧ ಪ್ರೋತ್ಸಾಹಕ ಯೋಜನೆಗಳನ್ನು ಜಾರಿಗೊಳಿಸಲು ಕೋರಿರುತ್ತಾರೆ. ಆದರೆ ಸರ್ಕಾರವು ಹಿಂದಿನ ವರ್ಷದಂತೆಯೇ ಪ್ರೋತ್ಸಾಹಕ ಬಹುಮಾನ ಯೋಜನೆಯನ್ನು ಯಾವುದೇ ಬದಲಾವಣೆ ಇಲ್ಲದೆ ಮುಂದುವರೆಸಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 122 ಸಉಲಾ 2004, ಬೆಂಗಳೂರು, ದಿನಾಂಕ: 19ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದ ಅಭಿವೃದ್ಧಿಗೆ ಅವಶ್ಯಕವಾಗಿರುವ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ದೃಷ್ಟಿಯಿಂದ ಸಣ್ಣ ಉಳಿತಾಯ ಸಂಗ್ರಹಣೆಗಾಗಿ ಸರ್ಕಾರದ ಆದೇಶ ಸಂಖ್ಯೆ: ಆಇ 44 ಸಉಲಾ 2003, ದಿನಾಂಕ: 29.09.2003 ರಲ್ಲಿ 2003-04ನೇ ಸಾಲಿಗೆ ಸಣ್ಣ ಉಳಿತಾಯ ಪ್ರೋತ್ಸಾಹಕ ಬಹುಮಾನ ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಇವೇ ಪ್ರೋತ್ಸಾಹಕ ಬಹುಮಾನ ಯೋಜನೆಗಳನ್ನು 2004-2005ನೇ ಸಾಲಿಗೂ ಸಹ ಅನ್ವಯಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2047-00-103-0-02-015-ಪೂರಕ ವೆಚ್ಚಗಳಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ.ಆರ್. 734 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

## ENERGY SECRETARIAT

**Subject:** Release of RE Subsidy to KPTCL for 2003-04 and adjustment between KPCL, KPTCL and Government of Karnataka.

**Read:** 1. G.O. No. DE 20 PSR 2002, Bangalore, dated: 31.03.2003.

**PREAMBLE**:

1. Re Subsidy payable by Government of Karnataka as per books of KPTCL as on 01.04.2003 is Rs.1816.49 crores. Total amount payable by GoK including the demand for 2003-04 (Rs.1604.79 crores provisional) is of the order of Rs.3421.28 crores.

2. Out of Rs.3421.28 crores payable by the Govt. of Karnataka as RE Loss Subsidy to KPTCL as at 31.03.2004, only Rs.1320.00 crores is paid by cash and Rs.46.80 crores towards outstanding interest due paid to NTPC through RBI during the year, accordingly; the total releases is at Rs.1366.80 crores, and the balance is Rs.2054.48 crores is yet to be released for 2003-04.

3. KPCL to pay Royalty Rs.27.59 crores and Guarantee Commission; Rs.3.76 crores, totaling in all to Rs.31.35 crores (rounded off) to GoK as at the end of 31st March 2004.

4. KPTCL/ESCOMs to pay Electricity Tax: Rs.243.24 crores; Interest on GoK Loans Rs.8.91 crores and adjustment of Rs.0.23 crores (minus figure) towards excess Guarantee Commission paid during the year totaling to Rs.251.92 crores.

5. During the year 2003-04, under various Govt. Orders a sum of Rs.1366.80 crores R.E. Subsidy has been released to KPTCL.

6. In view of the foregoing, a tripartite adjustment of dues between Government of Karnataka, KPTCL and KPCL is proposed to be carried during 2003-04. Hence, the following order:

**Government Order No: DE 20 PSR 2002, Bangalore, Dated: 31st March 2004.**

1. In the circumstances explained in the Preamble, Government are pleased to approve the following adjustments in the books of accounts of KPTCL, KPCL and GoK. Sanction is hereby accorded to adjust a sum of Rs.31.35 crores (Rupees Thirty one crores and thirty five lakhs only)-being the KPCL portion and Rs.251.92 crores (Rupees Two hundred fifty one crores and ninety two lakhs only)-KPTCL portion; as detailed below:

KPTCL PORTION (Rs. in Crores)

| | DEBIT | | CREDIT | |
|---|---|---|---|---|
| Sl.No. | Head of Account | Amount | Head of Account | Amount |
| 1 | (Receivables form KPTCL to Govt.) Subsidy to KPTCL For Loss due to Rural Electrification (Non-plan) 2801-80-101-1-04-106 | 251.92 | (Electricity Tax retained by the KPTCL) Electricity Tax 0043-00-101-0-01 | 243.24 |
| 2 | | | Interest on Loans to KPTCL: PMGY: 0.92 APDRP: 7.99 0049-04-190-0-02 | 8.91 |
| 3 | | | Guarantee Commission (Excess paid earlier adjusted) 0075-00-108-0-01 | (-) 0.23 |
| | Total A-01 to 03 | 251.92 | | 251.92 |

KPTCL PORTION (Rs. in Crores)

| | DEBIT | | CREDIT | |
|---|---|---|---|---|
| Sl.No. | Head of Account | Amount | Head of Account | Amount |
| 1 | (Royalty payable by KPCL to Govt.) (Guarantee Commission payable by KPCL to Govt.) Subsidy to KPTCL for Loss due to Rural Electrification (Non-plan) 2801-80-101-1-04-106 | 27.59 3.76 | Royalty from KPCL 0801-01-201-0-01 | 27.59 |
| 2 | | | Guarantee Commission 0075-00-108-0-01 | 3.76 |
| | **Total - B (01-02)** | **31.35** | | **31.35** |
| | **Total A+B** | **283.27** | | **283.27** |

2. In the current year Budget a provision of Rs.2065.00 crores has been made for RE subsidy under the head of account 2801-80-101-1-04-106. The RE subsidy for the year 2003-04 has been adjusted to Rs.1650.07 crores including the cash releases made.

3. The Government to adjust a sum of Rs.283.27 crores (Rupees two Hundred eighty three crores and twenty seven lakhs) only between KPCL, KPTCL and Govt. of Karnataka Accounts.

4. There is no outgo of cash involved in the issue. Therefore, Accountant General, Karnataka is requested to carryout necessary adjustments in their Books of Accounts during the year 2003-04.

5. KPCL, KPTCL and ESCOMs are permitted to carryout necessary adjustments in their Books of Accounts for 2003-04.

6. This issues with the concurrence of Finance Department vide U.O. Note No.FD 1084/Exp-1/2004, dated: 29.06.2004.

By Order and in the Name of the Governor of Karnataka,

**K.L. JAYARAM**

P.R. 735 Under Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಪಿ.ಹೆಚ್. ಗಂಗಾಧರ್‌ರಾವ್ ನಿವೃತ್ತ ಇಂಜಿನೀಯರ್-ಇನ್-ಚೀಫ್ ಇವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯವರ ನೇಮಕ-ಪರಿಷ್ಕೃತ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97, ದಿನಾಂಕ: 27.7.99.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97, ದಿನಾಂಕ: 16.3.2000.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ಗಂಗಾಧರ್‌ರಾವ್ ನಿವೃತ್ತ ಇಂಜಿನಿಯರ್ ಇನ್ ಚೀಫ್ ಇವರು ಈ ಹಿಂದೆ ಕೃಷ್ಣಾ ಮೇಲ್ದಂಡೆ ಯೋಜನೆ ಪುನರ್ ವಸತಿ ಮತ್ತು ಪುನರ್ ನಿರ್ಮಾಣ ಬಾಗಲಕೋಟೆ ವೃತ್ತ ಸೂಪರಿಂಟೆಂಡಿಂಗ್ ಇಂಜಿನೀಯರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬ್ಯಾಲಿಗಳ ಸಾಗಾಣಿಕೆ ಕುರಿತಂತೆ ಹೆಚ್ಚಿನ ದರದಲ್ಲಿ ಖಾಸಗಿಯವರಿಗೆ ಸಾಗಾಣಿಕೆಯನ್ನು ವಹಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ದುರ್ನಡತೆಯ ಆರೋಪಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್.ವಿ. ತಿಳಿಗುಳ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಉಲ್ಲೇಖ (2)ರ ದಿನಾಂಕ: 16.3.2000ದ ಆದೇಶದಲ್ಲಿ ನೇಮಕ ಮಾಡಲಾಗಿದೆ. ಆದರೆ 4 ವರ್ಷಗಳ ಕಾಲ ಸಂದಿದ್ದರೂ ಸಹ ವಿಚಾರಣಾಧಿಕಾರಿಯವರು ಇದುವರೆಗೂ ವಿಚಾರಣಾ ವರದಿಯನ್ನು ಸಲ್ಲಿಸದೆ ವಿಳಂಬ ಉಂಟಾಗಿದೆ. ಈ ಹಿನ್ನೆಲೆಯಲ್ಲಿ ಬೇರೆ ವಿಚಾರಣಾಧಿಕಾರಿಯನ್ನು ನೇಮಕ ಮಾಡುವ ಕುರಿತಂತೆ ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 15ನೇ ಜೂನ್ 2004**

ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಶ್ರೀ ಪಿ.ಹೆಚ್. ಗಂಗಾಧರರಾವ್, ನಿವೃತ್ತ ಇಂಜಿನೀಯರ್ ಇನ್ ಚೀಫ್ ಇವರ ವಿರುದ್ಧ ವಿಚಾರಣೆ ನಡೆಸಲು ಶ್ರೀ ಎಸ್.ವಿ. ತಿಳಿಗುಳ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮಾಡಿರುವ ನೇಮಕಾತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ. ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಮೇಲ್ಕಂಡ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ವಿಚಾರಣೆಯನ್ನು ಮೂರು ತಿಂಗಳ ಒಳಗಾಗಿ ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿಯನ್ನು ನೀಡಲು ಸೂಚಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಅಧೀನ ಕಾರ್ಯದರ್ಶಿ (ಪುನರ್ ವಸತಿ), ಕಂದಾಯ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರು ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 736 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಸ್.ಲಕ್ಷ್ಮೀನಾರಾಯಣ, ಸಹಾಯಕ ಕೃಷಿ ಅಧಿಕಾರಿ ಮೈಸೂರು, ಪ್ರಭಾರ ವ್ಯವಸ್ಥಾಪಕರು, ಬೀಜೋತ್ಪಾದನಾ ಕೇಂದ್ರ ರತ್ನಪುರಿ ಇ ವರನ್ನು ಸೇವೆಯಿಂದ ತೆಗೆದು ಹಾಕುವ ಆದೇಶ.

ಓದಲಾಗಿದೆ: 1. ಕೃಷಿ ಆಯುಕ್ತರ ಪ್ರಸ್ತಾವನೆ ಸಂ:ಇ ಎಸ್‌ಟಿ 1 ಐಎಸ್‌ಕ್ಯೂ (4):22:99:2000 ದಿನಾಂಕ:8-2-2002.

2. ಷೋಕಾಸ್ ನೋಟೀಸ್ ಸಂ:ಇ ಎಸ್‌ಟಿ 1 ಐಎಸ್‌ಕ್ಯೂ(4) 22:99:2000 ದಿನಾಂಕ:16-12-99.

3. ಶ್ರೀ ಎಸ್.ಲಕ್ಷ್ಮೀನಾರಾಯಣ ಅವರು ದೋಷಾರೋಪಣಾ ಪಟ್ಟಿಗೆ ನೀಡಿದ ಸ್ವೀಕೃತಿ ದಿ: 11.1.2000.

4. ವಿಚಾರಣಾಧಿಕಾರಿಗಳ ನೇಮಕದ ಆದೇಶ ಸಂ:ಇ ಎಸ್‌ಟಿ 1 ಐಎಸ್‌ಕ್ಯೂ(4)22:99:2000 ದಿನಾಂಕ:14-2-2000.

5. ಶ್ರೀ ಎಂ.ಎಸ್.ನಟರಾಜ್‌ಮೂರ್ತಿ ವಿಚಾರಣಾಧಿಕಾರಿಗಳ ವರದಿ ದಿನಾಂಕ:12-10-2000.
6. 2ನೇ ಕಾರಣ ಕೇಳುವ ನೋಟೀಸು ಸಂ: ಇ ಎಸ್‌ಟಿ 1 ಐಎನ್‌ಕ್ಯೂ (4) 22:99:2000 ದಿನಾಂಕ:3.11.2000.
7. ಶ್ರೀ ಎಸ್.ಲಕ್ಷ್ಮೀನಾರಾಯಣ ಅವರು ಲಿಖಿತ ಹೇಳಿಕೆ ದಿನಾಂಕ:8-3-2001.
8. ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಸಂ: ಪಿಎಸ್‌ಸಿ 108 ಸಿಎಸ್‌ಎಸ್ 2003 ದಿನಾಂಕ:17-11-2003.

**ಪ್ರಸ್ತಾವನೆ:**

ಕೃಷಿ ಆಯುಕ್ತರು ಮೇಲೆ (1)ರಲ್ಲಿ ಓದಲಾದ ದಿನಾಂಕ:8-2-2002ರ ಪ್ರಸ್ತಾವನೆಯಲ್ಲಿ ಶ್ರೀ ಎಸ್.ಲಕ್ಷ್ಮೀನಾರಾಯಣ, ಸಹಾಯಕ ಕೃಷಿ ಅಧಿಕಾರಿ ಹಾಗೂ ಪ್ರಭಾರ ವ್ಯವಸ್ಥಾಪಕರು, ಬೀಜೋತ್ಪಾದನಾ ಕೇಂದ್ರ, ರತ್ನಪುರಿ ಇ ವರು ಸುಮಾರು 2.50 ಲಕ್ಷಗಳನ್ನು ವಿವಿಧ ಬಿಲ್ಲುಗಳ ಮೂಲಕ ನಗದೀಕರಿಸಿ ಹಣ ದುರುಪಯೋಗ ಮಾಡಿದ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 16.12.99 ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಿಂದ 4ರ ವರೆಗೆ ತಯಾರಿಸಿ ಶ್ರೀ ಎಸ್.ಲಕ್ಷ್ಮೀನಾರಾಯಣ ರವರಿಗೆ ಜಾರಿ ಮಾಡಿರುತ್ತಾರೆ.

**ದೋಷಾರೋಪಣೆಗಳ ಸಂಕ್ಷಿಪ್ತ ವಿವರ ಈ ಕೆಳಗಿನಂತಿದೆ:-**

1) 1998-99 ಹಾಗೂ 99-2000 ನೇ ಸಾಲಿನಲ್ಲಿ ಮೂರು ಸಂಕ್ಷಿಪ್ತ ಸಾದಿಲ್ವಾರು ಬಿಲ್ಲುಗಳಲ್ಲಿ ನಗದೀಕರಿಸಿದ ಮೊತ್ತ ಒಟ್ಟು ರೂ.1,05,000-00 ಗಳ ದುರುಪಯೋಗ ಪಡಿಸಿಕೊಂಡಿರುವುದು.
2) 1998-99 ಹಾಗೂ 99-2000 ನೇ ಸಾಲಿನಲ್ಲಿ ಏಳು ಸಾದಿಲ್ವಾರು ಬಿಲ್ಲುಗಳಲ್ಲಿ ನಗದೀಕರಿಸಿದ ಮೊತ್ತ ಒಟ್ಟು ರೂ.40,949-00 ಗಳ ದುರುಪಯೋಗ ಪಡಿಸಿಕೊಂಡಿರುವುದು.
3) 1998-99ನೇ ಸಾಲಿನ ಪ್ರವಾಸ ಭತ್ಯೆ ಮೊತ್ತ ರೂ.2626-00 ರಲ್ಲಿ ರೂ.1928-00 ನ್ನು ಸಂಬಂಧಿಸಿದ ನೌಕರರಿಗೆ ಬಟವಾಡೆ ಮಾಡದೆ ಇ ರುವುದು.
4) ಕಾವೇರಿ ಗ್ರಾಮೀಣ ಬ್ಯಾಂಕ್ ರತ್ನಪುರಿ ಬ್ರಾಂಚ್ ಇ ಲ್ಲಿ ಹುದ್ದೆಯ ಹೆಸರಿನಲ್ಲಿ ತೆರೆಯಲಾಗಿದ್ದ ಖಾತೆಯಿಂದ ಯಾವುದೇ ಕಾರಣವಿಲ್ಲದೆ ದಿನಾಂಕ:20-10-98 ರಿಂದ ದಿನಾಂಕ:21-5-99ರ ವರೆಗೆ ಆರು ಸಂದರ್ಭಗಳಲ್ಲಿ ಒಟ್ಟು ರೂ.56,300-00ನ್ನು ನಗದೀಕರಿಸಿ ದುರುಪಯೋಗ ಪಡಿಸಿಕೊಂಡಿರುವುದು.
5) ರೂ.2395-60 ರ ಮೌಲ್ಯದ ಬಿತ್ತನೆ ರಾಗಿ ಬೀಜಗಳ ದುರುಪಯೋಗ.
6) ರೂ.18,430-00 ಮೌಲ್ಯದ ಬಿತ್ತನೆ ಭತ್ತ ಹಾಗೂ ರಾಗಿ ಬೀಜಗಳ ದುರುಪಯೋಗ.
7) ರೂ.15,850-00 ಮೌಲ್ಯದ ರಸಗೊಬ್ಬರ ಮತ್ತು ಔಷಧಿಗಳ ದುರುಪಯೋಗ.

ಈ ರೀತಿಯಾಗಿ ಒಟ್ಟು ರೂ.2,40,852-00 ಗಳನ್ನು ದುರುಪಯೋಗಪಡಿಸಿಕೊಂಡ ಆಪಾದನೆಯ ಬಗ್ಗೆ ಮೇಲೆ (2) ರಲ್ಲಿ ಓದಲಾದ ಷೋಕಾಸ್ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಡನೆ ಆಪಾದಿತರಿಗೆ ಜಾರಿ ಮಾಡಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಕೃಷಿ ನಿರ್ದೇಶಕರು ಸೂಚಿಸಿದ್ದು, ಆಪಾದಿತರು ಮೇಲೆ (2)ರಲ್ಲಿ ಓದಲಾದ ಷೋಕಾಸ್ ನೋಟೀಸನ್ನು ದಿನಾಂಕ:11-1-2000 ದಂದು ಸ್ವೀಕರಿಸಿ ಸ್ವೀಕೃತಿ ಪತ್ರ ಸಲ್ಲಿಸಿದ್ದು ಆದರೆ ನಿಯಮದಂತೆ ನಿಗದಿತ ಅವಧಿಯಲ್ಲಿ ಲಿಖಿತ ಹೇಳಿಕೆ ಸಲ್ಲಿಸದೆ ಇ ರುವುದರಿಂದ ಯಾವುದೇ ಉತ್ತರವಿಲ್ಲವೆಂದು ಪರಿಗಣಿಸಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಕೃಷಿ ನಿರ್ದೇಶಕರು ಮೇಲೆ (4) ರಲ್ಲಿ ಓದಲಾದ ದಿನಾಂಕ:14-2-2000 ರಂದು ಶ್ರೀ ನಟರಾಜ್ ಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸಿದ್ದು ವಿಚಾರಣಾಧಿಕಾರಿಗಳು ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿದ ನಂತರ ಆಪಾದಿತರ ಮೇಲೆ ಮಾಡಲಾದ ಏಳು ಆರೋಪಗಳ ಪೈಕಿ 1 ರಿಂದ 6ರ ವರೆಗಿನ ಆಪಾದನೆಗಳೂ ಸಾಬೀತಾಗಿರುತ್ತವೆಂದು ನಿರ್ಣಯ ನೀಡಿ ನೌಕರರ ವಿರುದ್ಧ ಮಾಡಲಾದ ಒಟ್ಟು ರೂ.2,40,852-00ಗಳ ಹಣ ದುರುಪಯೋಗದ ಆಪಾದನೆಯಲ್ಲಿ ಒಟ್ಟು ರೂ.2,25,000-00 ದುರುಪಯೋಗವಾಗಿರುವುದು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಈ ವಿಚಾರಣಾ ವರದಿಯನ್ನು ಮೇಲೆ (6)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿ ಮಾಡಿ ಅವರ ಲಿಖಿತ ಹೇಳಿಕೆಯನ್ನು ಮೇಲೆ (7)ರಲ್ಲಿ ಓದಲಾದ ದಿನಾಂಕ:8-3-2001 ರಂದು ಪಡೆದು ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿ ಅದರಲ್ಲಿ ಪರಿಗಣಿಸುವ ಅಂಶಗಳಿಲ್ಲವೆಂದು ಈ ಅಧಿಕಾರಿ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಸಂಬಂಧಿಸಿದವರಿಗೆ ನಿರ್ದೇಶನ ನೀಡಲಾಗಿದೆಯೆಂದು ಹಾಗೂ ಇ ವರ ಪರಿವೀಕ್ಷಣಾ ಅವಧಿ ಘೋಷಣೆಯಾಗಿರುವುದಿಲ್ಲ. ಆದ್ದರಿಂದ ಹಣ ದುರುಪಯೋಗ ಆಪಾದನೆ ಸಾಬೀತಾಗಿರುವುದರಿಂದ ಕಠಿಣ ದಂಡನೆಯನ್ನು ವಿಧಿಸಲು ಹಾಗೂ ದುರುಪಯೋಗ ಪಡಿಸಿಕೊಂಡಿರುವ ಮೊತ್ತದ ವಸೂಲಾತಿ ಬಗ್ಗೆ ಸರ್ಕಾರದ ಹಂತದಲ್ಲಿ ಕ್ರಮ ಕೈಗೊಳ್ಳಲು ಕೃಷಿ ಆಯುಕ್ತರು ಕೋರಿರುತ್ತಾರೆ.

ಸರ್ಕಾರವು ಕೃಷಿ ಆಯುಕ್ತರು ಸಲ್ಲಿಸಿದ ವಿಚಾರಣಾ ವರದಿ, ಆಪಾದಿತ ಅಧಿಕಾರಿಯ ಲಿಖಿತ ಹೇಳಿಕೆ ಹಾಗೂ ಕೃಷಿ ಆಯುಕ್ತರ ಕಂಡಿಕೆವಾರು ಉತ್ತರಗಳನ್ನು ಪರಿಶೀಲಿಸಲಾಗಿ ಮೊದಲನೆ ಆಪಾದನೆಗೆ ಸಂಬಂಧಿಸಿದಂತೆ ಸದರಿ ಅಧಿಕಾರಿಯು ಎ.ಸಿ.ಬಿಲ್ಲಿನಲ್ಲಿ ಡ್ರಾ ಮಾಡಿದ ರೂ.1,05,000-00 ಗಳನ್ನು ನಿಯಮಾನುಸಾರ ವೆಚ್ಚ ಮಾಡಿರುವುದಕ್ಕೆ ಯಾವುದೇ ದಾಖಲಾತಿಗಳನ್ನಾಗಲಿ ಅಥವಾ ವೋಚರುಗಳನ್ನಾಗಲಿ ಸಲ್ಲಿಸಿರುವುದಿಲ್ಲ. ಈ ಮೊತ್ತವನ್ನು ಅನುದಾನದ ಕೊರತೆ, ಹೆಚ್ಚುವರಿಯಾದ ಮಜೂರಿ ಬಾಬ್ತು ಇ ತ್ಯಾದಿಗಳಿಗೆ ಖರ್ಚುಮಾಡಿರುವುದಾಗಿ ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಿಳಿಸಿದ್ದು, ಸದರಿ ಅಧಿಕಾರಿಯು ನಿಗದಿ ಪಡಿಸಿದ ಅನುದಾನಕ್ಕಿಂತ ಹೆಚ್ಚಾಗಿ ವೆಚ್ಚ ಮಾಡಿ ಅವ್ಯವಹಾರವೆಸಗಿರುವುದು ಕಂಡು ಬರುತ್ತದೆ.

ಎರಡನೇ ಆರೋಪದಲ್ಲಿ ಏಳು ಡಿ.ಸಿ.ಬಿಲ್ಲುಗಳಲ್ಲಿ ನಗದೀಕರಿಸಿದ ರೂ.40,949-00 ಗಳನ್ನು ಬೀಜೋತ್ಪಾದನಾ ಕೇಂದ್ರ ಕಾರ್ಯಗಳಿಗೆ ಉಪಯೋಗಿಸಿದ ಯಾವುದೇ ದಾಖಲೆಗಳನ್ನು ಅವರು ವಿಚಾರಣಾ ವೇಳೆಯಲ್ಲಿ ಹಾಜರುಪಡಿಸಿರುವುದಿಲ್ಲ. ಡಿ.ಸಿ ಬಿಲ್ಲು ಸಂಖ್ಯೆ:5:99 ಮತ್ತು 6:99 ರಲ್ಲಿ ನಗಧೀಕರಿಸಿದ ಮೊತ್ತವನ್ನು ಅಧಿಕಾರಿಯು ಮೊದಲೇ ಮಾಡಿದ ವೆಚ್ಚಕ್ಕೆ ಸಂಬಂಧಿಸಿದಂತೆ ಹಿಂದಕ್ಕೆ ಪಡೆದಿರುವುದಾಗಿ ರಕ್ಷಣಾ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ವೆಚ್ಚ ಮಾಡಿರುವುದಕ್ಕೆ ದಾಖಲೆ ಹಾಗೂ ಸಾಕ್ಷಿಗಳನ್ನು ಒದಗಿಸದೇ ಇ ರುವುದರಿಂದ ಈ ಆಪಾದನೆ ಸಾಬೀತಾಗಿರುತ್ತದೆ.

ಮೂರನೇ ಆಪಾದನೆಯಲ್ಲಿ ಶ್ರೀ ಕೆ.ಕೆಂಚೇಗೌಡ, ಹಿಂದಿನ ವ್ಯವಸ್ಥಾಪಕರಿಗೆ ಬಾಕಿ ಇ ರುವ ಪ್ರವಾಸದ ಭತ್ಯೆ ರೂ.1,928-00 ಗಳನ್ನು ಸದರಿ ಅಧಿಕಾರಿಗೆ ಪಾವತಿ ಮಾಡಿರುವ ಬಗ್ಗೆ ವಿಚಾರಣಾ ಸಮಯದಲ್ಲಿ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ವಿಚಾರಣಾ ವರದಿ ಸ್ವೀಕರಿಸಿದ ನಂತರ ಸದರಿ ನೌಕರರಿಗೆ ಹಣ ಪಾವತಿಸಿದ ಬಗ್ಗೆ ದಾಖಲೆಗಳನ್ನು ಒದಗಿಸಿರುವುದು ಇ ತ್ತೀಚೆಗೆ ಸೃಷ್ಟಿಸಿದ ದಾಖಲೆಯೆಂದು ಕಂಡುಬರುವುದರಿಂದ ಆಪಾದನೆ ಸಾಭೀತಾಗಿರುತ್ತದೆ.

ನಾಲ್ಕನೇ ಆಪಾದನೆಯಲ್ಲಿ ಕಾವೇರಿ ಗ್ರಾಮೀಣ ಬ್ಯಾಂಕ್ ನಿಂದ 56,300-00 ರೂ.ಗಳನ್ನು ಯಾವುದೇ ಉದ್ದೇಶವಿಲ್ಲದೆ ಡ್ರಾ ಮಾಡಿ ಬೀಜೋತ್ಪಾದನಾ ಕಾರ್ಯಗಳಿಗೆ ವೆಚ್ಚ ಮಾಡಿರುವುದಕ್ಕೆ ಯಾವುದೇ ದಾಖಲೆಗಳನ್ನು ಆಪಾದಿತ ಅಧಿಕಾರಿ ಹಾಜರು ಪಡಿಸಿರುವುದಿಲ್ಲ. ಈ ಹಣವನ್ನು ಅನುದಾನದ ಕೊರತೆ ಹಾಗೂ ಹೆಚ್ಚುವರಿಯಾದ ಮಜೂರಿ ಬಾಬ್ತು ಇ ತ್ಯಾದಿಗಳಿಗೆ ಉಪಯೋಗಿ ಸಲಾಗಿದೆ ಎಂಬುದನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

ಐದನೇ ಆಪಾದನೆಯಲ್ಲಿ ರೂ.2,395-00 ಗಳು ವಿತರಣೆಯಾಗಿರುವುದನ್ನು ದಾಸ್ತಾನು ವಹಿಯಲ್ಲಿ ನಿಯಮಾನುಸಾರ ನಮೂದಿಸಿಲ್ಲವಾದ್ದರಿಂದ ಬಿತ್ತನೆ ಬೀಜಗಳು ದುರುಪಯೋಗವಾಗಿರುವ ಆಪಾದನೆ ಸಾಬೀತಾಗಿರುತ್ತದೆ. ಸದರಿ ಬೀಜಗಳನ್ನು ಬಿತ್ತನೆಗೆ ಬಳಸಿ ಅದನ್ನು ಪ್ರಗತಿ ಪತ್ರದಲ್ಲಿ ದಾಖಲಿಸಲಾಗಿದೆಯೆಂದು ಆಪಾದಿತ ಅಧಿಕಾರಿಯು ತಿಳಿಸಿರುವ ಹೇಳಿಕೆಯು ಸಮರ್ಪಕ ವಾಗಿರುವುದಿಲ್ಲ.

ಆರನೇ ಆರೋಪದಲ್ಲಿ ತಿರಸ್ಕೃತ ಬಿತ್ತನೆ ಬೀಜಗಳ ಮಾರಾಟದಿಂದ ಬಂದ ಮೊತ್ತ ರೂ.17,900-00 ಹಾಗೂ 53 ಖಾಲಿ ಗೋಣಿ ಚೀಲಗಳ ಬಾಬ್ತು ಸೇರಿ ಒಟ್ಟು ರೂ.18,430-00 ಗಳನ್ನು ದುರುಪಯೋಗ ಪಡಿಸಿಕೊಂಡಿರುವ ಆಪಾದನೆ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಆಪಾದಿತರು ಯಾವುದೇ ವಿವರಗಳನ್ನು ರೆಮಿಟೆನ್ಸ್ ರಿಜಿಸ್ಟರ್‌ನಲ್ಲಿ ದಾಖಲೆ ಮಾಡಿರುವುದಿಲ್ಲ. ಅಲ್ಲದೆ 53 ಗೋಣಿ ಚೀಲಗಳನ್ನು ಇ ವರ ನಂತರ ಬಂದ ವ್ಯವಸ್ಥಾಪಕರಿಗೆ ಹಸ್ತಾಂತರಿಸಿದ ಬಗ್ಗೆ ಯಾವುದೇ ದಾಖಲೆಗಳನ್ನು ನೀಡಿರುವುದಿಲ್ಲ.

ಶ್ರೀ ಎಸ್. ಲಕ್ಷ್ಮೀನಾರಾಯಣ, ಸಹಾಯಕ ಕೃಷಿ ಅಧಿಕಾರಿ ಅವರು ಪ್ರಭಾರ ವ್ಯವಸ್ಥಾಪಕರಾಗಿ ರತ್ನಪುರಿ ಬೀಜೋತ್ಪಾದನಾ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರೂ.2,25,000-00 ಗಳನ್ನು ದುರುಪಯೋಗ ಪಡಿಸಿಕೊಂಡಿರುವ ಆಪಾದನೆ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಈ ಅಧಿಕಾರಿಯು ದಿನಾಂಕ:21-10-1983 ರಂದು ಸಹಾಯಕ ಕೃಷಿ ಅಧಿಕಾರಿಯಾಗಿ ಸೇವೆಗೆ ಸೇರಿದ್ದು ಇ ದುವರೆವಿಗೂ ಅವರ ಪರಿವೀಕ್ಷಣಾ ಅವಧಿ ಘೋಷಣೆಯಾಗಿರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಇ ಷ್ಟೊಂದು ಹಣಕಾಸಿನ ಅವ್ಯವಹಾರವೆಸಗಿರುವುದು ಗಂಭೀರ ಸ್ವರೂಪವಾದ ಕರ್ತವ್ಯ ಲೋಪವಾಗಿರುತ್ತದೆ. ಆಪಾದಿತರು ನಗದೀಕರಿಸಿದ ಮೊತ್ತವನ್ನು ವೆಚ್ಚ ಮಾಡಿರುವುದಕ್ಕೆ ಯಾವುದೇ ದಾಖಲೆಗಳನ್ನು ಹಾಜರು ಪಡಿಸದೇ ಇ ರುವುದರಿಂದ ಅವರ ಲಿಖಿತ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಅಂಶಗಳು ಇ ಲ್ಲದೆ ಇ ರುವುದರಿಂದ ಹಾಗೂ ವಿಚಾರಣೆಯಲ್ಲಿ ಆಪಾದನೆ ಸಾಬೀತಾಗಿರುವುದರಿಂದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vii) ರನ್ವಯ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಹಾಗೂ ದುರುಪಯೋಗ ಪಡಿಸಿಕೊಂಡ ಹಣ ರೂ.2,25,000-00 ಗಳನ್ನು ಶೇ.12ರ ಬಡ್ಡಿ ಸಮೇತ ಕಾನೂನು ರೀತ್ಯಾ ವಸೂಲು ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ದಂಡನೆಗೆ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ (8) ರಲ್ಲಿ ಓದಲಾದ ದಿನಾಂಕ: 17-11-2003 ರಂದು ಪಡೆಯಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ:ಕೃತೋಇ 27 ಕೃಪವಿ 2002, ಬೆಂಗಳೂರು, ದಿನಾಂಕ: 7ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (vii) ರನ್ವಯ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀ ಎಸ್.ಲಕ್ಷ್ಮೀನಾರಾಯಣ, ಹಿಂದಿನ ಸಹಾಯಕ ಕೃಷಿ ಅಧಿಕಾರಿ, ಮೈಸೂರು ಪ್ರಭಾರ ವ್ಯವಸ್ಥಾಪಕರು, ಬೀಜೋತ್ಪಾದನಾ ಕೇಂದ್ರ, ರತ್ನಪುರಿ ಇ ವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಿದೆ.

ಸದರಿಯವರು ದುರುಪಯೋಗಪಡಿಸಿಕೊಂಡ ರೂ.2,25,000-00 (ಎರಡು ಲಕ್ಷದ ಇ ಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಗಳನ್ನು ಶೇ:12ರ ಬಡ್ಡಿ ಸಮೇತ ಕಾನೂನು ರೀತ್ಯಾ ವಸೂಲು ಮಾಡಲು ಸಹ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ದೇಸಾಯಿ**

ಪಿ.ಆರ್. 737 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇ ಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ಹಿಂದೂಸ್ತಾನ್ ಮೆಷಿನ್ ಟೂಲ್ಸ್ ನಿಯಮಿತ, ಬೆಂಗಳೂರು ಇವರ ಜಮೀನಿನಿಂದ ಕಿತ್ತು ತಂದಿರುವ ಶ್ರೀಗಂಧದ ಮರಗಳಿಗೆ ಬೋನಸ್ ಪಾವತಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 01 ಎಫ್‌ಎಸ್‌ಡಬ್ಲ್ಯೂ 2003, ದಿನಾಂಕ: 24.06.2003.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕ್ರಮಾಂಕ ಡಿ-1/ಸಿಆರ್-195/ಬಿಯುಡಿ/2001-02, ದಿನಾಂಕ: 07/13.11.2003ರ ಪತ್ರ.

3. ಉಪ ಪ್ರಧಾನ ವ್ಯವಸ್ಥಾಪಕರು (ಸಿಇ), ಹೆಚ್‌ಎಂಟಿ ವಾಚಸ್ ನಿಯಮಿತ, ಬೆಂಗಳೂರು ಇವರ ಕ್ರ. DGM(CS)/WFB/Sandalwood/2003-04 ದಿನಾಂಕ: 27.11.2003ರ ಪತ್ರ.
4. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕ್ರಮಾಂಕ: ಡಿ-1/ಸಿಆರ್-195/ಬಿಯುಡಿ/2003-04, ದಿನಾಂಕ: 08/17.04.2004ರ ಪತ್ರ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಸಾರ್ವಜನಿಕ ವಲಯ ಕಂಪೆನಿಯಾದ ಮೆ: ಹೆಚ್‌ಎಂಟಿ ಲಿಮಿಟೆಡ್, ಬೆಂಗಳೂರು ಇಲ್ಲಿನ ಜಮೀನಿನಿಂದ ಅರಣ್ಯ ಇಲಾಖೆಗೆ ಕಿತ್ತು ತಂದಿರುವ ಶ್ರೀಗಂಧದ ಮರಗಳಿಗೆ ಬೋನಸ್ ಮೊತ್ತವಾದ ರೂ.1,93,681/- (ಒಂದು ಲಕ್ಷದ ತೊಂಭತ್ತುಮೂರು ಸಾವಿರದ ಆರು ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ) ಗಳನ್ನು 2003-04ರ ಸಾಲಿನ ಸಂಬಂಧಿಸಿದ ಲೆಕ್ಕಶೀರ್ಷಿಕೆಯಡಿ ಲಭ್ಯವಿರುವ ಆಯವ್ಯಯದ ಮಿತಿಯಲ್ಲಿ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾಗಿರುವ ಪತ್ರದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು 2001ನೇ ವರ್ಷದಲ್ಲಿ ಮೆ: ಹಿಂದೂಸ್ತಾನ್ ಮೆಷಿನ್ ಟೂಲ್ಸ್ ನಿಯಮಿತ, ಬೆಂಗಳೂರು ಇವರ ಇನ್ನೆರಡು ಪ್ರಕರಣಗಳಲ್ಲಿ ಅವರ ಜಮೀನಿನಿಂದ ಕಿತ್ತು ತಂದು ಕೊಟ್ಟಿರುವ ಶ್ರೀಗಂಧದ ಮರಗಳಿಗೆ ರೂ.1,22,512/- ಬೋನಸ್ ಪಾವತಿಸಲು ಅನುದಾನ ಬಿಡುಗಡೆ ಕೋರಿ ಕಳುಹಿಸಿದ್ದ ಎರಡು ಪ್ರಕರಣಗಳನ್ನು ಸರ್ಕಾರಕ್ಕೆ ಕಳುಹಿಸಿ, ಬೋನಸ್ ಪಾವತಿಸಲು ಮಂಜೂರಾತಿಯನ್ನು ನೀಡುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಸರ್ಕಾರವನ್ನು ಕೋರಿರುವರು.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಉಪ ವ್ಯವಸ್ಥಾಪಕ ನಿರ್ದೇಶಕರು (ಸಿಇ), ಹೆಚ್‌ಎಂಟಿ ವಾಚಸ್ ಲಿಮಿಟೆಡ್, ಬೆಂಗಳೂರು ಇವರು ಅವರಿಗೆ ಸಂಬಂಧಿಸಿದ ಬೋನಸ್ ಮೊತ್ತವನ್ನು ಆದಷ್ಟು ಶೀಘ್ರವಾಗಿ ಮಾಡುವಂತೆ ಸರ್ಕಾರವನ್ನು ಕೋರಿರುವರು.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಮೆ: ಹಿಂದೂಸ್ತಾನ್ ಮೆಷಿನ್ ಟೂಲ್ಸ್ ನಿಯಮಿತ ಇವರಿಗೆ ಅವರ ಹೆಚ್‌ಎಂಟಿ ಡೈ ಕಾಸ್ಟಿಂಗ್ ಡಿವಿಷನ್, ಜಾಲಹಳ್ಳಿ, ಬೆಂಗಳೂರು ಮತ್ತು ಹೆಚ್‌ಎಂಟಿ ವಾಚ್ ಫ್ಯಾಕ್ಟರಿ, ಜಾಲಹಳ್ಳಿ, ಬೆಂಗಳೂರು ಇಲ್ಲಿನ ಜಮೀನುಗಳಿಂದ ಅರಣ್ಯ ಇಲಾಖೆಗೆ ಕಿತ್ತು ತಂದಿರುವ ಶ್ರೀಗಂಧದ ಮೇಲಿನ ಎರಡು ಪ್ರಕರಣಗಳು ಹೊಸ ಪ್ರಕರಣಗಳಾಗಿದ್ದು ಹಿಂದೆ ಸರ್ಕಾರವು ಬೋನಸ್ ಪಾವತಿಸಲು ನೀಡಿರುವ ಮಂಜೂರಾತಿಯಲ್ಲಿ ಇವು ಸೇರಿರುವುದಿಲ್ಲವೆಂದು ಅವುಗಳಿಗೆ ಪಾವತಿಸಬೇಕಾಗಿರುವ ಬೋನಸ್ ಮೊತ್ತ ಅನುಕ್ರಮವಾಗಿ ರೂ.23,050/- (ಇಪ್ಪತ್ತಮೂರು ಸಾವಿರದ ಐವತ್ತು ರೂಪಾಯಿಗಳು ಮಾತ್ರ) ಹಾಗೂ ರೂ.99,462/- (ತೊಂಭತ್ತೊಂಭತ್ತು ಸಾವಿರದ ನಾಲ್ಕುನೂರ ಅರವತ್ತೆರಡು ರೂಪಾಯಿಗಳು ಮಾತ್ರ) ಒಟ್ಟು ಸೇರಿ ರೂ.1,22,512/- (ಒಂದು ಲಕ್ಷದ ಇಪ್ಪತ್ತೆರಡು ಸಾವಿರದ ಐದುನೂರ ಹನ್ನೆರಡು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುವರು. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 06 ಎಫ್‌ಎಸ್‌ಡಬ್ಲ್ಯೂ 2003, ಬೆಂಗಳೂರು, ದಿನಾಂಕ: 5ನೇ ಜುಲೈ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2001ನೇ ವರ್ಷದಲ್ಲಿ ಮೆ: ಹಿಂದೂಸ್ತಾನ್ ಮೆಷಿನ್ ಟೂಲ್ಸ್, ಬೆಂಗಳೂರು, ಇವರ ಹೆಚ್‌ಎಂಟಿ ಡೈ ಕಾಸ್ಟಿಂಗ್ ಡಿವಿಷನ್, ಜಾಲಹಳ್ಳಿ, ಬೆಂಗಳೂರು ಮತ್ತು ಹೆಚ್‌ಎಂಟಿ ವಾಚ್ ಫ್ಯಾಕ್ಟರಿ, ಜಾಲಹಳ್ಳಿ, ಬೆಂಗಳೂರು ಇಲ್ಲಿನ ಜಮೀನಿನಿಂದ ಅರಣ್ಯ ಇಲಾಖೆಗೆ ಕಿತ್ತು ತಂದು ಕೊಟ್ಟಿರುವ ಶ್ರೀಗಂಧದ ಮರಗಳಿಗೆ ಸಂಬಂಧಿಸಿದಂತೆ ಅನುಕ್ರಮವಾಗಿ ಹೆಚ್‌ಎಂಟಿ ಡೈ ಕಾಸ್ಟಿಂಗ್ ಡಿವಿಷನ್, ಜಾಲಹಳ್ಳಿ, ಬೆಂಗಳೂರು - ರೂ.23,050/- (ಇಪ್ಪತ್ತಮೂರು ಸಾವಿರದ ಐವತ್ತು ರೂಪಾಯಿಗಳು ಮಾತ್ರ) ಮತ್ತು ಹೆಚ್‌ಎಂಟಿ ವಾಚ್ ಫ್ಯಾಕ್ಟರಿ, ಜಾಲಹಳ್ಳಿ, ಬೆಂಗಳೂರು-ರೂ.99,462/- (ತೊಂಭತ್ತೊಂಭತ್ತು ಸಾವಿರದ ನಾಲ್ಕುನೂರ ಅರವತ್ತೆರಡು ರೂಪಾಯಿಗಳು ಮಾತ್ರ) ಶ್ರೀಗಂಧದ ಬೋನಸ್ಸು ಮೊತ್ತ ಒಟ್ಟಾರೆ ರೂ.1,22,512/- (ಒಂದು ಲಕ್ಷದ ಇಪ್ಪತ್ತೆರಡು ಸಾವಿರದ ಐದುನೂರ ಹನ್ನೆರಡು ರೂಪಾಯಿಗಳು ಮಾತ್ರ) ಗಳನ್ನು ಮೆ: ಹಿಂದೂಸ್ತಾನ್ ಮೆಷಿನ್ ಟೂಲ್ಸ್ ನಿಯಮಿತ, ಬೆಂಗಳೂರು ಇವರಿಗೆ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಅವರ ಟಿಪ್ಪಣಿ ಕ್ರಮಾಂಕ: ಆಇ 422 ವೆಚ್ಚ-2004, ದಿನಾಂಕ: 11.06.2004 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 738 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಕೆ.ಎಂ. ನಾಗರಾಜು, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ತುಮಕೂರು ಇವರು ಎಸಗಿರುವ ಅಕ್ರಮ/ಕರ್ತವ್ಯಲೋಪಗಳಿಗೆ ಸಂಬಂಧಿಸಿದಂತೆ ಅವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರ ಪತ್ರ ಸಂಖ್ಯೆ: ಎಂ.ಎಲ್.ಎ.ಡಿ.ಎಸ್, ಸಿಆರ್-44/2002-03, ದಿನಾಂಕ: 25.3.2004.

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದಿಂದ ಕುಣಿಗಲ್ ವಿಧಾನಸಭಾ ಕ್ಷೇತ್ರದಲ್ಲಿ 02-03ನೇ ಸಾಲಿನ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ತುಮಕೂರು ತಾ. ಶ್ರೀಕಂಠಯ್ಯನಪಾಳ್ಯದ ಕಿರು ನೀರು ಸರಬರಾಜು ಯೋಜನೆಯ ಕಾಮಗಾರಿಯನ್ನು ಕೈಗೊಳ್ಳಲು 1.50 ಲಕ್ಷ ರೂ.ಗಳ ವೆಚ್ಚದಲ್ಲಿ ಕಾಮಗಾರಿ ಮಂಜೂರು ಮಾಡಿ 3,200 ಎಂಟಿ ಆಹಾರ ಧಾನ್ಯವನ್ನು ತುಮಕೂರು ತಹಸೀಲ್ದಾರ್‌ರಿಂದ ಪಡೆದುಕೊಳ್ಳುವಂತೆ ಸೂಚಿಸಿ, ಸಾಮಗ್ರಿ ವೆಚ್ಚ 1.20 ಲಕ್ಷ ರೂ.ಗಳ ಮತ್ತು ನಗದು ವೆಚ್ಚ 10,000-00

ರೂ.ಗಳ ಒಟ್ಟು 1.30 ಲಕ್ಷ ರೂ.ಗಳಲ್ಲಿ ಮೊದಲ ಕಂತಾಗಿ 65,000-00 ರೂ.ಗಳನ್ನು ತುಮಕೂರು ಜಿಲ್ಲಾಧಿಕಾರಿಗಳು ದಿನಾಂಕ: 28.6.2003 ರಂದು ಬಿಡುಗಡೆ ಮಾಡಿದ್ದರು. ಆದರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ತುಮಕೂರು ಇವರು ದಿನಾಂಕ: 19.8.2003 ರಂದು ತುಮಕೂರು ತಹಸೀಲ್ದಾರ್‌ರಿಂದ 3,200 ಎಂ.ಟಿ. ಆಹಾರ ಧಾನ್ಯಕ್ಕೆ ಬದಲಾಗಿ 4,320 ಎಂ.ಟಿ. ಆಹಾರ ಧಾನ್ಯವನ್ನು ಅಂದರೆ ಮಂಜೂರಾಗಿದ್ದ ಆಹಾರ ಧಾನ್ಯಕ್ಕಿಂತ 1,120 ಎಂ.ಟಿ. ಆಹಾರ ಧಾನ್ಯ ಹೆಚ್ಚಿಗೆ ಪಡೆದುಕೊಂಡಿದ್ದು, ಕೈತಪ್ಪಿನಿಂದ ಈ ರೀತಿ ಆಗಿದೆಯೆಂದು ಬೇಜವಾಬ್ದಾರಿ ಉತ್ತರ ನೀಡಿರುತ್ತಾರೆ. ಇವರು ನೀಡಿರುವ ಉತ್ತರ ಸೂಕ್ತವಲ್ಲ ಮತ್ತು ಇದೊಂದು ಹಾರಿಕೆಯ ಉತ್ತರ ಹಾಗೂ ಇದನ್ನು ಒಪ್ಪಲು ಸಾಧ್ಯವಿಲ್ಲ ಹಾಗೂ 1,120 ಎಂ.ಟಿ. ಆಹಾರ ಧಾನ್ಯವನ್ನು ಯಾರಿಗೆ ಮತ್ತು ಯಾವ ಆಧಾರದ ಮೇಲೆ ಖರ್ಚು ಮಾಡಲಾಗಿದೆ ಎಂಬ ಬಗ್ಗೆಯಾಗಲಿ ಅಥವಾ ಪಡೆದ ಹೆಚ್ಚುವರಿ ಆಹಾರಧಾನ್ಯವನ್ನು ಹಿಂಪಡೆಯುವಂತೆಯಾಗಲಿ ಅಥವಾ ಈ ಹೆಚ್ಚುವರಿ ಆಹಾರಧಾನ್ಯ ವಿತರಣೆಯಾಗದೆ ದಾಸ್ತಾನಿನಲ್ಲಿ ಇರುವ ಬಗ್ಗೆಯಾಗಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ಕೆ.ಎಂ. ನಾಗರಾಜು ಇವರು ಏನನ್ನು ಹೇಳದೇ ಇರುವುದರಿಂದ ಇವರ ಈ ಕ್ರಮವನ್ನು ಗಂಭೀರವಾಗಿ ಪರಿಗಣಿಸುವುದರೊಂದಿಗೆ ಇವರು ಬರಪರಿಹಾರ ಕಾಮಗಾರಿಯನ್ನು ತನ್ನ ಮನಸ್ಸಿಗೆ ಬಂದಂತೆ ನಿರ್ವಹಿಸುವುದು, ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಮಂಜೂರು ಮಾಡಿದ ಆಹಾರಧಾನ್ಯಕ್ಕಿಂತ ಹೆಚ್ಚುವರಿ ಆಹಾರಧಾನ್ಯ ಪಡೆದು ಆಹಾರಧಾನ್ಯ ಉಪಯೋಗಿಸಿದ ಬಗ್ಗೆ ಸರಿಯಾಗಿ ಲೆಕ್ಕ ನೀಡದೆ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಇದಕ್ಕಾಗಿ ಇವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ದಿನಾಂಕ: 25.3.2004ರ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಸರ್ಕಾರವು ತುಮಕೂರು ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ, ಶ್ರೀ ಕೆ.ಎಂ. ನಾಗರಾಜು, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ತುಮಕೂರು ಇವರು ಬರಪರಿಹಾರ ಕಾಮಗಾರಿ ಯೋಜನೆಯಡಿ ಆಹಾರಧಾನ್ಯ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡು ಬರುವುದರಿಂದ, ಇವರ ಈ ಗುರುತರ ಕರ್ತವ್ಯಲೋಪಕ್ಕಾಗಿ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 28 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಕೆ.ಎಂ. ನಾಗರಾಜು, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ತುಮಕೂರು ಇವರು ಬರಪರಿಹಾರ ಕಾಮಗಾರಿ ಯೋಜನೆಯಡಿ ಆಹಾರಧಾನ್ಯ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡು ಬರುವುದರಿಂದ, ಇವರ ಈ ಗುರುತರ ಕರ್ತವ್ಯಲೋಪಕ್ಕಾಗಿ ಇವರ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ) ರನ್ವಯ ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಕೆ.ಎಂ. ನಾಗರಾಜು ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ತುಮಕೂರು ಇವರಿಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು ಮತ್ತು ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿ ಇಲ್ಲದೆ ಅವರ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 739

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ವೆನಿಕ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಹಂಚಿಕೆಯಾಗಿರುವ 500 ಕಿಲೋ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು 750 ಕಿಲೋ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 99 ಎನ್‌ಸಿಇ 2004, ದಿನಾಂಕ: 12.3.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಮಲ್ಲಿಗೆರೆ/2004/1142, ದಿನಾಂಕ: 25.6.2004.

**ಪ್ರಸ್ತಾವನೆ:**

ಮೆಸರ್ಸ್ ವೆನಿಕ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ ಮಲ್ಲಿಗೆರೆ ಗ್ರಾಮದ ಮದ್ದೂರು ಬ್ರಾಂಚ್ ಕೆನಾಲ್‌ನಲ್ಲಿ 500 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಹರಿವು 20 ಕ್ಯುಮೆಕ್ಸ್ ಹಾಗೂ ನೀರಿನ ಎತ್ತರ 4.68 ಮೀಟರ್ ಇರುವುದರಿಂದ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 500 ಕಿಲೋ ವ್ಯಾಟ್ ನಿಂದ 750 ಕಿಲೋ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 99 ಎನ್‌ಸಿಇ 2004, ಬೆಂಗಳೂರು, ದಿನಾಂಕ: 7ನೇ ಜುಲೈ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೆಸರ್ಸ್ ವೆನಿಕ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ ಮಲ್ಲಿಗೆರೆ ಗ್ರಾಮದ ಮದ್ದೂರು

ಬ್ರಾಂಚ್ ಕೆನಾಲ್‌ನಲ್ಲಿ ಮೇಲೆ (1)ರ ಆದೇಶದಲ್ಲಿ ಹಂಚಿಕೆ ಮಾಡಲಾದ 500 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು 750 ಕಿಲೋ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು, ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಪಿ.ಆರ್. 740 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ: ಬಸವಂತಪ್ಪ ಎಸ್.ಪಿ. ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ, ದಾವಣಗೆರೆ ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ - ಸೇವೆಯಿಂದ ತೆಗೆದುಹಾಕುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಾಇ 852 ಎಲ್‌ಎಸ್‌ಐ 2000, ದಿನಾಂಕ: 30.03.2001.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್:ಇವಿ:64:03-04, ದಿನಾಂಕ: 20.05.2004.

**ಪ್ರಸ್ತಾವನೆ:**

ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಎಸ್.ಪಿ. ಬಸವಂತಪ್ಪ, ವಿಮಾ ವೈದ್ಯಾಧಿಕಾರಿಗಳು ಇವರು ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನುಸಾರ ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ, ದಾವಣಗೆರೆ ಇಲ್ಲಿ ದಿನಾಂಕ: 23.4.2001 ರಂದು ಸೇವಾ ವರದಿ ಮಾಡಿಕೊಂಡಿದ್ದು ದಿನಾಂಕ: 9.1.2003 ರಿಂದ 15.1.2003ರ ವರೆಗೆ ಸಾಂಧರ್ಬಿಕ ರಜೆಯ ಮೇಲೆ ತೆರಳಿದವರು ರಜಾ ಅವಧಿ ತೀರಿದ ನಂತರ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ವೈದ್ಯರಿಗೆ ದಿನಾಂಕ: 22.4.2003 ಹಾಗೂ 04/30.06.2003ರ ಸೂಚನಾ ಪತ್ರಗಳನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಅವರ ಲಭ್ಯವಿರುವ ಇತ್ತೀಚಿನ ಸ್ವಗ್ರಾಮ ವಿಳಾಸಕ್ಕೆ ಕಳುಹಿಸಲಾಗಿದ್ದು ಇವರ ಗೈರುಹಾಜರಾತಿಯಿಂದ ವಿಮಾ ರೋಗಿಗಳಿಗೆ ಹಾಗೂ ಚಿಕಿತ್ಸಾಲಯದ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದರಿಂದ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತೆಂದೂ ಈ ರೀತಿ ಜಾರಿ ಮಾಡಲಾದ ಸೂಚನಾ ಪತ್ರಗಳಲ್ಲಿ ದಿನಾಂಕ: 3.3.2003ರ ಸ್ವೀಕೃತಿ ಪತ್ರವನ್ನು ಹೊರತುಪಡಿಸಿ ಇತರೆ ಸೂಚನಾ ಪತ್ರಗಳು ಪಾರ್ಟಿ ರೆಫ್ಯೂಸ್ಡ್, ಪಾರ್ಟಿ ಲಿಫ್ಟ್ ಎನ್ನುವ ಷರಾದೊಡನೆ ವಿಳಾಸದಾರರಿಗೆ ಬಟವಾಡೆಯಾಗದೇ ಹಿಂತಿರುಗಿರುವುದಾಗಿ ತಿಳಿಸಿರುತ್ತಾರೆ. ಡಾ: ಎಸ್.ಪಿ. ಬಸವಂತಪ್ಪ, ಇವರು ಖಾಯಂಪೂರ್ವ ಸೇವಾ ಅವಧಿಯಲ್ಲಿರುವಾಗಲೇ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗುವುದರ ಮೂಲಕ ಹಾಗೂ ಮೇಲಾಧಿಕಾರಿಗಳ ಆದೇಶವನ್ನು ದಿಕ್ಕರಿಸಿ ಒಬ್ಬ ಪತ್ರಾಂಕಿತ ಅಧಿಕಾರಿಯಾಗಿ, ವೈದ್ಯರಾಗಿ ಚಿಕಿತ್ಸಾಲಯದ ವಿಮಾ ರೋಗಿ ಮತ್ತು ಅವರ ಕುಟುಂಬದ ಶುಶ್ರೂಷೆ:ಚಿಕಿತ್ಸೆ ನೀಡುವುದನ್ನು ಕಡೆಗಣಿಸಿರುವುದು ವೈದ್ಯರಿಗೆ ಸರ್ಕಾರಿ ಸೇವೆಯಲ್ಲಿ ಸೇವಾ ಮನೋಭಾವನೆ ಇಲ್ಲದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆಂದು ತಿಳಿಸುತ್ತಾ ಡಾ: ಎಸ್.ಪಿ. ಬಸವಂತಪ್ಪ, ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ ದಾವಣಗೆರೆ ಇವರು ಸೇವೆಗೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 9.1.2003 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಖಾಯಂಪೂರ್ವ ಸೇವಾ ಅವಧಿ) 1977ರ ನಿಯಮ 6ರಡಿ ಸರ್ಕಾರಿ ಸೇವೆಯಿಂದ ತೆಗೆದುಹಾಕುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 84 ಎಲ್‌ಎಸ್‌ಐ 2003, ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಡಾ: ಎಸ್.ಪಿ. ಬಸವಂತಪ್ಪ, ವಿಮಾ ವೈದ್ಯಾಧಿಕಾರಿಗಳು, ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಕೆ.ಬಿ. ಬಡಾವಣೆ, ದಾವಣಗೆರೆ, ಇವರು ಖಾಯಂಪೂರ್ವ ಸೇವಾ ಅವಧಿಯಲ್ಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಮತ್ತು ಸರ್ಕಾರಿ ಸೇವೆಯಲ್ಲಿ ಕರ್ತವ್ಯ ನಿಷ್ಠೆ ಹೊಂದಿಲ್ಲದಿರುವುದರಿಂದ, ಇವರು ನೇಮಕಗೊಂಡ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ ಸೇವಾ ಅವಧಿ) ನಿಯಮಗಳು 1977ರ ನಿಯಮ 5(1)(ಬಿ) ರನ್ವಯ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 9.1.2003 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ವಿಶ್ವನಾಥ್**
ಪಿ.ಆರ್. 741 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

**ವಿಷಯ:** ಡಾ: ಹೆಚ್.ಆರ್. ವತ್ಸಲ, ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಚಿಕಿತ್ಸಾಲಯ, ಕೆ.ಆರ್. ಪುರಂ-1 ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ - ಸರ್ಕಾರಿ ಸೇವೆಯಿಂದ ತೆಗೆದುಹಾಕುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಾಇ 852 ಎಲ್‌ಎಸ್‌ಐ 2000, ದಿನಾಂಕ: 30.03.2001.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್:ಇವಿ:24:02-03, ದಿನಾಂಕ: 19.11.2002.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಡಾ: ಹೆಚ್.ಆರ್. ವತ್ಸಲ, ವಿಮಾ ವೈದ್ಯಾಧಿಕಾರಿ, ಇವರನ್ನು ಕಾರಾವಿ ಚಿಕಿತ್ಸಾಲಯ, ಕೆ.ಆರ್. ಪುರಂ-1 ಇಲ್ಲಿಗೆ 2 ವರ್ಷಗಳ ಖಾಯಂಪೂರ್ವ ಸೇವಾ ಅವಧಿಯ ಮೇಲೆ ವಿಮಾ ವೈದ್ಯಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು.

ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು, ಇವರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಹೆಚ್.ಆರ್. ವತ್ಸಲ, ಇವರು ದಿನಾಂಕ: 2.3.2002 ರಿಂದ 26.3.2002ರ ವರೆಗೆ ಸ್ವಂತ ಕೆಲಸದ ಮೇರೆಗೆ 25 ದಿನಗಳ ಗಳಿಕೆ ರಜೆಯನ್ನು ಪಡೆದಿದ್ದು ಪುನಃ ದಿನಾಂಕ: 3.4.2002ರ ವರೆಗೆ ಕರ್ತವ್ಯ ನಿರ್ವಹಿಸಿ ದಿನಾಂಕ: 4.4.2002 ರಿಂದ 24.4.2002ರ ವರೆಗೆ ಅರ್ಧ ವೇತನ ರಜೆ, ದಿನಾಂಕ: 25.4.2002 ರಿಂದ 30.4.2002ರ ವರೆಗೆ ಗಳಿಕೆ ರಜೆಯನ್ನು ಮಂಜೂರುಗೊಳಿಸುವಂತೆ ಕೋರಿ ರಜೆ ಅರ್ಜಿಯನ್ನು ಸಲ್ಲಿಸಿದ್ದರೆಂದೂ ಹಾಗೂ ದಿನಾಂಕ: 1.5.2002 ರಿಂದ 31.5.2002ರ ವರೆಗೆ ವ್ಯಾಸಂಗಕ್ಕಾಗಿ ರಜೆಯನ್ನು ಮಂಜೂರು ಮಾಡುವಂತೆ ಹಾಗೂ ಯು.ಕೆ. ಯಲ್ಲಿ ತಾವು ಸ್ನಾತಕೋತ್ತರ ಶಿಕ್ಷಣವನ್ನು ಹೊಂದುವುದಾಗಿ ತಿಳಿಸಿದ್ದರೆಂದೂ ವರದಿ ಮಾಡಿರುತ್ತಾರೆ.

ಡಾ: ಹೆಚ್.ಆರ್. ವತ್ಸಲ, ವಿಮಾ ವೈದ್ಯಾಧಿಕಾರಿ ಇವರು ಖಾಯಂಪೂರ್ವ ಸೇವಾ ಅವಧಿಯಲ್ಲಿರುವಾಗಲೇ ಮತ್ತು ಖಾಯಂಪೂರ್ವ ಸೇವೆಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನವೇ ಪೂರ್ವ ಭಾವಿಯಾಗಿ ತಮ್ಮ ಮೇಲಾಧಿಕಾರಿಗಳಿಂದ ರಜೆಗಳನ್ನು ಮಂಜೂರುಗೊಳಿಸಿಕೊಳ್ಳದೇ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗಿದ್ದರೆಂದೂ ಇದರಿಂದಾಗಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ವೈದ್ಯರ ಇತ್ತೀಚಿನ ಗೃಹ ವಿಳಾಸಕ್ಕೆ ನೋಂದಾಯಿತ ಅಂಚೆ ಸ್ವೀಕೃತಿ ಪತ್ರದೊಡನೆ ಸೂಚನಾ ಪತ್ರಗಳನ್ನು ದಿನಾಂಕ: 20/25.6.2002, 06/17.7.2002 ರಂದು ಮತ್ತು ಅಂತಿಮ ಸೂಚನಾ ಪತ್ರವನ್ನು ದಿನಾಂಕ: 22.8/2.9.2002 ರಂದು ಕಳುಹಿಸಲಾಗಿದ್ದು, ಸದರಿಯವರ ಸಂಬಂಧಿಯು ಮೊದಲ ಎರಡು ಸೂಚನಾ ಪತ್ರಗಳನ್ನು ಸ್ವೀಕರಿಸಿದ್ದರೂ ಸಹ ಸದರಿ ವೈದ್ಯರು ಕರ್ತವ್ಯಕ್ಕೆ ಹಾಜರಾಗದೇ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುವುದಾಗಿ ವರದಿ ಮಾಡಿರುತ್ತಾರೆ. ಡಾ: ಹೆಚ್.ಆರ್. ವತ್ಸಲ, ಇವರು ಒಬ್ಬ ಪತ್ರಾಂಕಿತ ಅಧಿಕಾರಿಯಾಗಿದ್ದು ತಾವು ವೈದ್ಯರೆಂಬುದನ್ನು ಮರೆತು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುವುದರ ಮೂಲಕ ಖಾಯಂಪೂರ್ವ ಸೇವಾ ಅವಧಿಯಲ್ಲೇ ಕರ್ತವ್ಯದಲ್ಲಿ ಉದಾಸೀನತೆ ತೋರಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ ಸೇವಾ ಅವಧಿ) ನಿಯಮಗಳು 1977ರ ನಿಯಮ 5(1) (ಬಿ) ಪ್ರಕಾರ ಇವರು ಕರ್ತವ್ಯಕ್ಕೆ ಗೈರುಹಾಜರಾದ ದಿನಾಂಕ: 4.4.2002 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 02 ಎಲ್‌ಎಸ್‌ಐ 2003, ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಡಾ: ಹೆಚ್.ಆರ್. ವತ್ಸಲ, ವಿಮಾ ವೈದ್ಯಾಧಿಕಾರಿಗಳು, ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಕೆ.ಆರ್.ಪುರಂ-1 ಇವರು ಖಾಯಂಪೂರ್ವ ಸೇವಾ ಅವಧಿಯಲ್ಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಮತ್ತು ಸರ್ಕಾರಿ ಸೇವೆಯಲ್ಲಿ ಕರ್ತವ್ಯ ನಿಷ್ಠೆ ಹೊಂದಿಲ್ಲದಿರುವುದರಿಂದ, ಇವರು ನೇಮಕಗೊಂಡ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ ಸೇವಾ ಅವಧಿ) ನಿಯಮಗಳು 1977ರ ನಿಯಮ 5(1)(ಬಿ) ರನ್ವಯ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 04.04.2002 ರಿಂದಲೇ ಜಾರಿಗೆ ಬರುವಂತೆ ಇವರನ್ನು ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್. 742 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

**ವಿಷಯ:** ಡಾ: ಹಲೀಮುನ್ನೀಸಾ ವಿ.ವೈ, ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್, ಬೆಂಗಳೂರು ಇವರ ಅನಧಿಕೃತ ಗೈರು ಹಾಜರಿ - ಸೇವೆಯಿಂದ ತೆಗೆದು ಹಾಕುವ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ವೈದ್ಯರು:390/92-93, ದಿನಾಂಕ: 21.12.1993.
2. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಎಸ್‌ಡಬ್ಲ್ಯೂಎಲ್ 02 ಎಲ್‌ಎಸ್‌ಐ 94, ದಿ: 12.01.94.
3. ಡಾ: ಹಲೀಮುನ್ನೀಸಾ, ವಿ.ವೈ, ಇವರ ದಿನಾಂಕ: 06.04.94ರ ರಕ್ಷಣಾ ಹೇಳಿಕೆ.
4. ನಿರ್ದೇಶಕರು, ಕಾರಾವಿ ಇವರ ಅಧಿಕೃತ ಜ್ಞಾಪನಾಪತ್ರ ಸಂಖ್ಯೆ: ವೈದ್ಯರು/340/92-93, ದಿ: 27.10.94.
5. ಸರ್ಕಾರದ ಆದೇಶ ಸಂಖ್ಯೆ: ಕಾಇ 64 ಎಲ್‌ಎಸ್‌ಐ 96, ದಿನಾಂಕ: 21.10.97.
6. ವಿಚಾರಣಾಧಿಕಾರಿಗಳ ವರದಿ ದಿನಾಂಕ: 24.04.98.
7. ಸರ್ಕಾರದಿಂದ ಜಾರಿ ಮಾಡಲಾದ 2ನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 64 ಎಲ್‌ಎಸ್‌ಐ 96, ದಿನಾಂಕ: 22.06.98.
8. ಡಾ: ಹಲೀಮುನ್ನೀಸಾ, ವಿ.ವೈ. ಇವರ ದಿನಾಂಕ: 08.12.99ರ ಹೇಳಿಕೆ.
9. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್/ಇವಿ/109/03-04, ದಿನಾಂಕ: 17.05.2004.
10. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ವೈದ್ಯರು/168/2004-05, ದಿನಾಂಕ: 05.06.2004.

ಪ್ರಸ್ತಾವನೆ:

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಹಲೀಮುನ್ನೀಸಾ, ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್, ಬೆಂಗಳೂರು ಇವರು ದಿನಾಂಕ: 21.05.1993 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ತಿಳಿಸಿ ಇವರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವಂತೆ ಕೋರಿ, ದೋಷಾರೋಪಣೆ ಪಟ್ಟಿಯನ್ನು ರೂಪಿಸಿ ಸಲ್ಲಿಸಿದ್ದರು. ಸದರಿ ವೈದ್ಯರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2) ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಡಾ: ಹಲೀಮುನ್ನೀಸಾ, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್, ಬೆಂಗಳೂರು ಇವರು ದಿನಾಂಕ: 06.04.94ರ ತಮ್ಮ ಪತ್ರದಲ್ಲಿ ನೀಡಿದ ರಕ್ಷಣಾ ಹೇಳಿಕೆಯಲ್ಲಿ ತಮ್ಮ ವಿರುದ್ಧ ಮಾಡಲಾಗಿದ್ದ ದೋಷಾರೋಪಣೆಯನ್ನು ನಿರಾಕರಿಸಿ ತಮ್ಮ ಅನಾರೋಗ್ಯದ ಕಾರಣದಿಂದ ಕರ್ತವ್ಯಕ್ಕೆ ಹಾಜರಾಗಿರಲಿಲ್ಲವೆಂದು ತಾವು ಈಗ ಕರ್ತವ್ಯಕ್ಕೆ ಹಾಜರಾಗಲು ಯೋಗ್ಯರಾಗಿರುವುದರಿಂದ ತಮ್ಮನ್ನು ಕರ್ತವ್ಯಕ್ಕೆ ತೆಗೆದುಕೊಳ್ಳುವಂತೆ ಕೋರಿದ್ದರು. ಸದರಿ ಕೋರಿಕೆಯನ್ನು ಪರಿಶೀಲಿಸಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಮೇಲೆ (4) ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಇವರನ್ನು ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್ ಇಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲಾಗಿತ್ತು. ಅದರಂತೆ ಅವರು ಕರ್ತವ್ಯಕ್ಕೆ ಹಾಜರಾಗಿದ್ದಾರೆ.

ಡಾ: ಹಲೀಮುನ್ನೀಸಾ ಇವರು ತಮ್ಮ ವಿರುದ್ಧ ಮಾಡಲಾಗಿದ್ದ ಆರೋಪಗಳಿಗೆ ಸಂಬಂಧಿಸಿದಂತೆ ಸಲ್ಲಿಸಿದ್ದ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ ಆರೋಪಗಳ ಸತ್ಯಾಸತ್ಯತೆ ಬಗ್ಗೆ ತಿಳಿದುಕೊಳ್ಳುವ ದೃಷ್ಟಿಯಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ: ಹೆಚ್.ಬಿ. ಲಿಂಗಮ್ಮ ಉಪನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶ್ರೀ ಜಗನ್ನಾಥರಾವ್, ಕಛೇರಿ ಅಧೀಕ್ಷಕರು, ಕಾರಾವಿ ಯೋ (ವೈ) ಸೇವೆಗಳು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (6) ರಲ್ಲಿ ಓದಲಾದ ತಮ್ಮ ವರದಿಯಲ್ಲಿ ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಟ್ಟಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (7) ರಲ್ಲಿ ಓದಲಾದ ದಿನಾಂಕ: 22.06.98ರ ನೋಟೀಸಿನೊಂದಿಗೆ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬ ಬಗ್ಗೆ ತಮ್ಮ ಅಹವಾಲೇನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿ ಡಾ: ಹಲೀಮುನ್ನೀಸಾ, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್, ಬೆಂಗಳೂರು ಇವರಿಗೆ ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲಾಗಿತ್ತು. ಡಾ: ಹಲೀಮುನ್ನೀಸಾ ಇವರು ಮೇಲೆ (8) ರಲ್ಲಿ ಓದಲಾದ ದಿನಾಂಕ: 08.12.99ರ ರಕ್ಷಣಾ ಹೇಳಿಕೆಯಲ್ಲಿ ತಾವು ಅನಾರೋಗ್ಯ ಹಾಗೂ ಕೌಟುಂಬಿಕ ತೊಂದರೆಗಳಿಂದಾಗಿ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (9) ಹಾಗೂ (10) ರಲ್ಲಿ ಓದಲಾದ ತಮ್ಮ ಪತ್ರಗಳಲ್ಲಿ ಡಾ: ಹಲೀಮುನ್ನೀಸಾ ಇವರು ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್ ಇಲ್ಲಿ ಈ ಕೆಳಕಂಡ ಅವಧಿಯಲ್ಲಿ ಸಹ ಕರ್ತವ್ಯದಿಂದ ಅನಧಿಕೃತ ಗೈರು ಹಾಜರಾಗಿರುವುದಾಗಿ ತಿಳಿಸಿರುತ್ತಾರೆ.

1) ದಿನಾಂಕ: 09.11.98 ರಿಂದ 30.11.98
2) ದಿನಾಂಕ: 01.05.2000 ದಿಂದ 20.05.2000
3) ದಿನಾಂಕ: 01.06.2000 ದಿಂದ 18.10.2000
4) ದಿನಾಂಕ: 02.08.2002 ರಿಂದ 31.08.2002
5) ದಿನಾಂಕ: 01.01.2003 ರಿಂದ 17.06.2003

ಅಲ್ಲದೆ ಸದರಿ ವೈದ್ಯರು ಈ ದಿನಾಂಕದವರೆಗೆ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವ ಬಗ್ಗೆ ಅಗತ್ಯ ದಾಖಲೆಗಳನ್ನು ಸಲ್ಲಿಸದಿರುವುದರಿಂದ ಖಾಯಂ ಪೂರ್ವಾವಧಿ ತೃಪ್ತಿಕರವೆಂದು ಘೋಷಿಸುವುದಕ್ಕೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿಲ್ಲವೆಂದೂ ಹಾಗೂ ಖಾಯಂಪೂರ್ವಾವಧಿ ಘೋಷಣೆಯಾಗಿರುವುದಿಲ್ಲವೆಂದೂ ತಿಳಿಸಿರುತ್ತಾರೆ.

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 64 ಎಲ್‌ಎಸ್‌ಐ 96, ಬೆಂಗಳೂರು, ದಿನಾಂಕ: 7ನೇ ಜುಲೈ 2004**

ಡಾ: ಹಲೀಮುನ್ನೀಸಾ, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್, ಬೆಂಗಳೂರು ಇವರು ದಿನಾಂಕ: 21.05.93 ರಿಂದ 28.10.94 ರವರೆಗೆ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ಸಿವಿಲ್ ಸೇವಾ ನಿಯಮಗಳು ನಿಯಮ 108 ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 8(vii) ರನುಸಾರ ಇವರಿಗೆ ಸರ್ಕಾರಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ**

ಪಿ.ಆರ್. 743

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಂತಿಮ ಅಧಿಸೂಚನೆ ಸಂಖ್ಯೆ: ನಅಇ 151 ಮೈಅಪ್ರಾ 2001, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2004

ಚಾಮರಾಜನಗರ-ರಾಮಸಮುದ್ರ ನಗರಾಭಿವೃದ್ಧಿ ಪ್ರಾಧಿಕಾರವು ಮೂಡ್ಲುಪುರ ಬಡಾವಣೆಗಾಗಿ, ಮೂಡ್ಲುಪುರ ಗ್ರಾಮದ ಈ ಕೆಳಕಂಡ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987ರ ಸೆಕ್ಷನ್ 17(1)ರ ಪ್ರಕಾರ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಿದೆ.

ಈ ಯೋಜನೆಗಾಗಿ ಸರ್ಕಾರದ ಆದೇಶದ ಸಂಖ್ಯೆ: ನಅಇ:151:ಮೈಅಪ್ರಾ, ಬೆಂಗಳೂರು ದಿನಾಂಕ: 18.2.2003 ರಂತೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ನಿಯಮಾವಳಿ ಕಲಂ 18(3) ರ ಸರ್ಕಾರದಿಂದ ಮಂಜೂರಾತಿ ನೀಡಿದೆ. ಈ ಯೋಜನೆಯ ನಕಲನ್ನು ಚಾಮರಾಜನಗರ-ರಾಮಸಮುದ್ರ ನಗರಾಭಿವೃದ್ಧಿ ಪ್ರಾಧಿಕಾರದ ಕಛೇರಿಯಲ್ಲಿ ಪರಿಶೀಲನೆಗೆ ಇಡಲಾಗಿದೆ. ಈ ಯೋಜನೆಗೆ ಈ ಕೆಳಕಂಡ ಜಮೀನುಗಳ ಸಾರ್ವಜನಿಕ ಉದ್ದೇಶಕ್ಕೆ, ಅಂದರೆ, ಮೂಡ್ಲುಪುರ ಬಡಾವಣೆ ನಿರ್ಮಾಣಕ್ಕಾಗಿ ಅವಶ್ಯಕವಾಗಿ ಇರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದುದರಿಂದ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987ರ ಸೆಕ್ಷನ್ 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಜಮೀನುಗಳನ್ನು ಮೂಡ್ಲುಪುರ ಬಡಾವಣೆ ಮಾಡಲು ಭೂ ಸ್ವಾಧೀನ ಪಡಿಸಿಕೊಳ್ಳಲು ತೀರ್ಮಾನಿಸಲಾಗಿದೆ.

ಈ ಜಮೀನುಗಳನ್ನು ಭೂ ಸ್ವಾಧೀನ ಪಡಿಸಿಕೊಳ್ಳಲು ಭೂ ಸ್ವಾಧೀನ ಕಾಯ್ದೆ 1894ರ ಕಲಂ 3(ಸಿ) ರನ್ವಯ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರಿಗೆ ಅಧಿಕಾರವನ್ನು ನೀಡಲಾಗಿದೆ.

### ಅನುಸೂಚಿ

**ಜಿಲ್ಲೆ:** ಚಾಮರಾಜನಗರ **ತಾಲ್ಲೂಕು:** ಚಾಮರಾಜನಗರ **ಗ್ರಾಮ:** ಮೂಡ್ಲುಪುರ (ಕಸಬಾ ಹೋಬಳಿ)

| ಕ್ರ. ಸಂ. | ಸ.ನಂ. | ಖಾತೆದಾರರ : ಅನುಭವದಾರರ ಹೆಸರು | ಸ್ವತ್ತಿನ ವಿವರಗಳು | | | | | ಚೌತರ್ಫು | | | | ಜುಮ್ಲಾ |
|---|---|---|---|---|---|---|---|---|---|---|---|---|
| | | | ಖುಷ್ಕಿ ಎ.ಗುಂ. | ಭೌ.ತರಿ ಎ.ಗುಂ. | ಖರಾಬು ಎ.ಗುಂ. | ಜುಮ್ಲಾ ಎ.ಗುಂ. | ಕಂದಾಯ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಬೇಕಾದ ವಿಸ್ತೀರ್ಣ ಎ.ಗುಂ. |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | 4:1 | ಬಸವಣ್ಣ ಬಿನ್ ಶಿವಪ್ಪ, ಗುರುಸಿದ್ದಪ್ಪ ಬಿನ್ ವೀರಪ್ಪ | 1-39 | - | - | 1-39 | 3-76 | ಸ.ನಂ.5 | ಮೂಡ್ಲುಪುರ ಗ್ರಾಮ | ಸ.ನಂ.2 ಮತ್ತು 3 | ಸ.ನಂ. 4:2 | 1-29 |
| 2 | 4:2 | ಪಿ. ಪುಟ್ಟಸುಬ್ಬಪ್ಪ ಬಿನ್ ಸುಬ್ಬಪ್ಪ | 1-33 | - | 0-01 | 1-34 | 3-48 | ಸ.ನಂ. 7:2ಬಿ ಮತ್ತು 5 | 20 | 4:1 | 20 | 1-34 |
| 3 | 5 | ಪಿ. ಬಸವಣ್ಣ ಬಿನ್ ಪುಟ್ಟಪ್ಪ | 1-28 | - | 0-01 | 1-29 | 3-03 | 6 | 4 | ಚಾಮರಾಜ ನಗರ ಗಡಿ | 7:2ಬಿ ಮತ್ತು 7:2ಎ | 1-29 |
| 4 | 6 | ಪಿ. ಬಸವಣ್ಣ ಬಿನ್ ಪುಟ್ಟಪ್ಪ ಪಿ. ಮಹದೇವಪ್ಪ ಬಿನ್ ಪುಟ್ಟಪ್ಪ | 5-10 | - | - | 5-10 | 9-35 | ಚಾಮರಾಜ ನಗರ ಗಡಿ | 5 | ಚಾಮರಾಜ ನಗರ ಗಡಿ | 7:2ಎ ಮತ್ತು 7:1 | 5-10 |
| 5 | 7:1 | ಬಿ. ಸತ್ಯಕುಮಾರ್, ಬಿನ್ ಎಂ.ಎಸ್. ಬಂಗಾರಸ್ವಾಮಿ | 2-32 | - | - | 2-32 | 21-15 | ಗಾಳಿಪುರ ಗಡಿ | 7:2ಎ | 6 | 8:1 ಮತ್ತು ರಸ್ತೆ | 2-32 |
| 6 | 7:2ಎ | ಎಂ. ಗುರುಮಲ್ಲಪ್ಪ ಬಿನ್ ಮಾದಪ್ಪ | 1-07 | - | - | 1-07 | 2-16 | 7:1 | 7:2ಬಿ | 6 ಮತ್ತು 5 | 8:2 ಮತ್ತು 8:1 | 1-07 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 7 | 7:2ಬಿ | ಸುಬ್ಬಣ್ಣ ಬಿನ್ ಚನ್ನಬಸಪ್ಪ | 1-10 | - | - | 1-10 | 2-32 | 7:2ಎ | 4:2 | 5 | 8:2 | 1-10 |
| 8 | 8:1 | ಎಂ.ಎಸ್. ಬಂಗಾರಸ್ವಾಮಿ,<br>ಬಿ. ಸತ್ಯಕುಮಾರ್<br>ಬಿನ್ ಎಂ.ಎಸ್. ಬಂಗಾರಸ್ವಾಮಿ | 0-33 | - | 0-01 | 0-34 | 6-33 | 7:1 ಮತ್ತು ರಸ್ತೆ | 8:2 | 7:1 ಮತ್ತು 7:2ಎ | ರಸ್ತೆ | 0-02 |
| 9 | 8:2 | ಬಸವಣ್ಣ ಬಿನ್ ಶಿವಪ್ಪ | 2-17 | - | - | 2-17 | 4-33 | 8:1 | 20 | 7:2ಬಿ ಮತ್ತು 7:2ಎ | 8:3 ಮತ್ತು ರಸ್ತೆ | 2-17 |
| 10 | 8:3 | ಸುಬ್ಬಣ್ಣ ಬಿನ್ ಚನ್ನಬಸಪ್ಪ | 1-13 | - | - | 1-13 | 2-37 | ರಸ್ತೆ | 19 | 8:2 | ರಸ್ತೆ | 1-13 |
| 11 | 9:1 | ರುಬಿಯಾಬಿ,<br>ಕೋಂ ಲೇ: ಸೈಯದ್ ಇಸ್ಮಾಯಿಲ್<br>ಸೈಯದ್ ಸನಾವುಲ್ಲಾ ಬಿನ್ ಲೇ.<br>ಸೈಯದ್ ಇಸ್ಮಾಯಿಲ್ ಸಾಹೇಬ್,<br>ಸೈಯದ್ ಅಮಾನುಲ್ಲಾ ಬಿನ್ ಲೇ.<br>ಸೈಯದ್ ಇಸ್ಮಾಯಿಲ್ ಸಾಹೇಬ್,<br>ಸೈಯದ್ ಉಬೇದುಲ್ಲಾ ಬಿನ್ ಲೇ.<br>ಸೈಯದ್ ಇಸ್ಮಾಯಿಲ್ ಸಾಹೇಬ್. | 5-00 | - | 0-04 | 5-13 | 9-31 | ರಸ್ತೆ | 12 | 11 | 13:3 | 0-05 |
| 12 | 11 | ಸರ್ಕಾರಿ ಗ್ರಾವೆಲ್ ಗುಂಡಿ | 0-13 | - | - | 0-13 | - | ರಸ್ತೆ | 12 ಮತ್ತು ರಸ್ತೆ | ರಸ್ತೆ | 9:1 ಮತ್ತು 12 | 0-13 |
| 13 | 12 | ಲಕ್ಷ್ಮಮ್ಮ ಶ್ರೀಮತಿ ಮಣಿಯಮ್ಮ<br>ಕೋಂ ಲೇ. ಮಾದಯ್ಯ | 3-16 | - | - | 3-16 | 5-16 | 9:1 ಮತ್ತು 13:3 | 16 | ರಸ್ತೆ | 13:4ಬಿ ಮತ್ತು 13:4ಎ | 3-16 |
| 14 | 13:3 | ನಂಜುಂಡಪ್ಪ ಬಿನ್ ಚನ್ನಪ್ಪ<br>ರತ್ನಮ್ಮ ಬಿನ್ ನಂಜಯ್ಯ,<br>ಮಹದೇವಯ್ಯ ಬಿನ್ ಚನ್ನಯ್ಯ<br>ನಂಜಮ್ಮಣಿ ಕೋಂ ಮಹದೇವಯ್ಯ,<br>ಕೃಷ್ಣ ಬಿನ್ ಬಸವಯ್ಯ,<br>ಎನ್. ನಾಗಯ್ಯ ಬಿನ್ ನಂಜಯ್ಯ | 0-37 | - | 0-10 | 1-07 | 1-54 | ರಸ್ತೆ | 12 ಮತ್ತು 13:4ಎ | 9:1 | ಮಲ್ಲಯ್ಯನ ಪುರ ಗಡಿ | 0-29 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 15 | 13:4ಎ | ಇ. ಲೆನುಕ್ ಬಿನ್ ಎಲಿಯೋಜೆನ್ | 0-29 | - | - | 0-29 | 1-12 | 13:3 | 13:4ಬಿ | 9:1 | ಮಲ್ಲಯ್ಯನ ಪುರ ಗಡಿ | 0-29 |
| 16 | 13:4ಬಿ | ರೆವರೆಂಡ್ ಪಿ.ಹೆಚ್. ಹನ್ಸ್ | 0-31 | - | - | 0-31 | 1-29 | 13:4ಎ | 14 | 12 | ಮಲ್ಲಯ್ಯನ ಪುರ ಗಡಿ | 0-31 |
| 17 | 14 | ಎಸ್.ಎನ್. ಸರಸ್ವತಮ್ಮ ಕೋಂ ಬಿ. ನಾಗೇಂದ್ರಯ್ಯ | 4-10 | - | 0-01 | 4-11 | 18-91 | 13:4ಬಿ ಮತ್ತು 12 | 15:1 ಮತ್ತು 15:2ಬಿ | 16 | 15:2ಬಿ | 2-04 |
| 18 | 15:2ಎ | ಎಂ. ಸುನಂದಮ್ಮ ಕೋಂ ಜಿ. ಮಲ್ಲಿಕಾರ್ಜುನಪ್ಪ | 0-24 | - | - | 0-24 | 1-14 | 15:2ಸಿ | ಮಲ್ಲಯ್ಯನ ಪುರ ಗಡಿ | 15:2ಬಿ | ಮಲ್ಲಯ್ಯನ ಪುರ ಗಡಿ | 0-24 |
| 19 | 15:2ಬಿ | ಸುಬ್ಬಮ್ಮ ಕೋಂ ಲೇ ಮಾದಪ್ಪ ಬಸವಣ್ಣ ಬಿನ್ ಲೇ ಮಾದಪ್ಪ ಶಿವಮಲ್ಲಪ್ಪ ಬಿನ್ ಲೇ. ಮಾದಪ್ಪ | 1-17 | - | - | 1-17 | 2-72 | ಮಲ್ಲಯ್ಯನ ಪುರ ಗಡಿ | ಮಲ್ಲಯ್ಯನ ಪುರ ಗಡಿ | 15:1 ಮತ್ತು 14 | 15:2ಎ ಮತ್ತು 15:2ಸಿ | 1-17 |
| 20 | 15:2ಸಿ | ಬಸವಣ್ಣ ಬಿನ್ ಚನ್ನಂಜಪ್ಪ | 0-37 | - | - | 0-37 | 1-77 | ಮಲ್ಲಯ್ಯನ ಪುರ ಗಡಿ | 15:2ಎ | 15:2ಬಿ | ಮಲ್ಲಯ್ಯನ ಪುರ ಗಡಿ | 0-37 |
| 21 | 16 | ಎಸ್.ಎನ್. ಸರಸ್ವತಮ್ಮ ಕೋಂ ಬಿ. ನಾಗೇಂದ್ರಯ್ಯ | 2-23 | - | - | 2-23 | 9-16 | 12 | ರಸ್ತೆ | ರಸ್ತೆ | 14 ಮತ್ತು 15:1 | 1-30 |
| 22 | 20: 14ಎ1ಎ1 | ಎಂ. ಬಸವರಾಜು ಬಿನ್ ಲೇ. ಎಂ.ಎಸ್. ಮಹದೇವಪ್ಪ | 2-12 1/2 | - | - | 2-12 1/2 | 4-40 | 8:2 | ಉಳಿಕೆ ಜಮೀನು | 4:2 | 19 | 1-08 |
| | | | | | | | | | | | ಒಟ್ಟು | 33-26 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 702

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಅಸ್ತಿತ್ವದಲ್ಲಿರುವ ಜಂಟಿ ಕಾರ್ಯದರ್ಶಿ-3 ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆ ಎಂದು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 61 ಸಸಿವಿ 2003, ದಿನಾಂಕ: 11.7.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 85 ಸಸಿವಿ 2003, ದಿನಾಂಕ: 3.12.2003.
3. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 302 ಎಸ್ಎಎಸ್ 2004, ದಿನಾಂಕ: 8.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 11.7.2003ರ ಸರ್ಕಾರದ ಆದೇಶದಲ್ಲಿ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಒಂದು ಉಪ ಕಾರ್ಯದರ್ಶಿ-3 ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು. ನಂತರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 3.12.2003ರ ಸರ್ಕಾರದ ಆದೇಶದಲ್ಲಿ ಸದರಿ ಉಪ ಕಾರ್ಯದರ್ಶಿ-3 ಹುದ್ದೆಯನ್ನು ಶ್ರೀಮತಿ ವಿ. ವಿದ್ಯಾವತಿ, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಂಟಿ ಕಾರ್ಯದರ್ಶಿ-3 ಹುದ್ದೆ ಎಂದು ಪರಿವರ್ತಿಸಲು ಹಾಗೂ ಈ ಹುದ್ದೆಗೆ ನಿಗದಿಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ನೀಡಲು ಮಂಜೂರಾತಿ ನೀಡಲಾಗಿದ್ದಿತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ದಿನಾಂಕ: 8.6.2004ರ ಅಧಿಸೂಚನೆಯಲ್ಲಿ ಶ್ರೀ ಜಾವೇದ್ ಅಕ್ತರ್, ಐ.ಎ.ಎಸ್. ಇವರನ್ನು ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಉನ್ನತೀಕರಿಸಲಾದ ಅಪರ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಜಂಟಿ ಕಾರ್ಯದರ್ಶಿ-3 ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆ ಎಂದು ಮಾರ್ಪಡಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 47 ಸಸಿವಿ 2004, ಬೆಂಗಳೂರು, ದಿನಾಂಕ: 24ನೇ ಜೂನ್ 2004**

ಅಧಿಸೂಚನೆ ಸಂಖ್ಯೆ: ಡಿಪಿಎಆರ್ 302 ಎಸ್ಎಎಸ್ 2004, ದಿನಾಂಕ: 8.6.2004 ರಲ್ಲಿ ಶ್ರೀ ಜಾವೇದ್ ಅಕ್ತರ್, ಐ.ಎ.ಎಸ್. ಇವರನ್ನು ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಅಪರ ಕಾರ್ಯದರ್ಶಿ ಹುದ್ದೆಗೆ ವರ್ಗಾಯಿಸಿ ನೇಮಿಸಿರುವ ಹಿನ್ನೆಲೆಯಲ್ಲಿ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಜಂಟಿ ಕಾರ್ಯದರ್ಶಿ-3 ಹುದ್ದೆಯನ್ನು ದಿನಾಂಕ: 8.6.2004 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಪರ ಕಾರ್ಯದರ್ಶಿ ಹುದ್ದೆ ಎಂದು ಮಾರ್ಪಡಿಸಲು ಹಾಗೂ ಆದೇಶ ಸಂಖ್ಯೆ: ಸಿಆಸುಇ 61 ಸಸಿವಿ 2003, ದಿನಾಂಕ: 11.7.2003 ರಲ್ಲಿ ಸೃಜಿಸಿದ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಡಿತ ಸಂಖ್ಯೆ: ಸಿಆಸುಇ 85 ಸಸಿವಿ 2003ರ ಟಿಪ್ಪಣಿ ಕಂಡಿಕೆ 7 ರಲ್ಲಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 2014 ವೆಚ್ಚ-5:2003, ದಿನಾಂಕ: 27.11.2003 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 745

**ವಿಷಯ:** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 103 ಎಸ್ಇಎನ್ 2002, ದಿನಾಂಕ: 24.9.2003.
2. ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವರದಿ ದಿನಾಂಕ: 27.5.2004.

**ಪ್ರಸ್ತಾವನೆ:**

ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ರವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 24.9.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ವಿಚಾರಣೆ ನಡೆಸಿದ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮೇಲೆ (2) ರಲ್ಲಿ ಓದಲಾದ ದಿನಾಂಕ: 27.5.2004ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 103 ಎಸ್ಇಎನ್ 2002, ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಸರ್ಕಾರವು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ವಿಚಾರಣಾ ವರದಿ ಸಲ್ಲಿಸಿದ ಕಾರಣ ಅವರಿಗೆ ಸರ್ಕಾರಿ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.4.1998 ರನ್ವಯ ರೂ.5000-00 (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ:

4.3.2002 ರನ್ವಯ ರೂ.1000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಾವತಿ ಮಾಡಲು ಈ ಮೂಲಕ ಆದೇಶಿಸಿದೆ.

ಈ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ '2052-ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01 ಕರ್ನಾಟಕ ಸರ್ಕಾರದ ಸಚಿವಾಲಯದ-014 ಇತರೆ ಭತ್ಯೆಗಳು' ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 746 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಬಿ.ಎನ್. ಸುರೇಶ್, ಕೆಎಎಸ್ ಅಧಿಕಾರಿ ಇವರು ರಾಜ್ಯ ಹೆದ್ದಾರಿ ಅನುಷ್ಠಾನ ಘಟಕದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಗೈರು ಹಾಜರಾಗಿರುವ ಬಗ್ಗೆ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಎಸ್‌ಇಎನ್ 2003, ದಿನಾಂಕ: 12.8.2003.

2. ಶ್ರೀ ಬಿ.ಎನ್. ಸುರೇಶ್ ಇವರ ಲಿಖಿತ ಉತ್ತರ ದಿನಾಂಕ: 10.9.2003.

**ಪ್ರಸ್ತಾವನೆ:**

ಶ್ರೀ ಬಿ.ಎನ್. ಸುರೇಶ್, ಕೆಎಎಸ್ ಇವರು ಕರ್ನಾಟಕ ರಾಜ್ಯ ಹೆದ್ದಾರಿ ಅನುಷ್ಠಾನ ಘಟಕ ಇಲ್ಲಿ ಮುಖ್ಯ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 11.7.2002 ರಿಂದ 17.6.2003ರ ವರೆಗೆ ರಜೆ ಮಂಜೂರು ಮಾಡಿಸಿಕೊಳ್ಳದೆ ಗೈರು ಹಾಜರಾಗಿರುವ ಬಗ್ಗೆ ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಸರ್ಕಾರದ ನೋಟೀಸಿನಲ್ಲಿ ಈ ಅಧಿಕಾರಿಯ ಸಮಜಾಯಿಷಿ ಕೇಳುವುದರ ಮೂಲಕ ಇವರ ವಿರುದ್ಧ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಗಿತ್ತು. ಮೇಲಿನ ಉಲ್ಲೇಖ (2) ರಲ್ಲಿ ಲಿಖಿತ ಹೇಳಿಕೆಯ ಮೂಲಕ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಆದ್ದರಿಂದ ಶ್ರೀ ಬಿ.ಎನ್. ಸುರೇಶ್ ಇವರ ವಿರುದ್ಧ ಮಾಡಲಾದ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯುವ ಉದ್ದೇಶದಿಂದ ಮೇಲ್ಕಂಡ ಆರೋಪಗಳ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 6ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಎಸ್. ಸುರೇಶ್, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಪ್ರೊ: ಎಸ್. ಇಂದುಧರ ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ರೂ.5000-00 ಗೌರವಧನ ಹಾಗೂ ರೂ.1000-00 ಪ್ರಯಾಣ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಿಚಾರ್ಡ್ ಲೋಬೋ ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಯೋಜನಾ ನಿರ್ದೇಶಕರು, ರಾಜ್ಯ ಹೆದ್ದಾರಿ ಅನುಷ್ಠಾನ ಘಟಕ, ಕೆ.ಆರ್. ವೃತ್ತ, ಬೆಂಗಳೂರು ರವರು ಕ್ರಮ ಕೈಗೊಳ್ಳುತ್ತಾರೆ.

ವಿಚಾರಣೆಯನ್ನು 3 ತಿಂಗಳೊಳಗೆ ಪೂರ್ತಿಗೊಳಿಸಿ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 747 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ ಮಲ್ಲಸಂದ್ರದ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ 1993-94ರಿಂದ 1998-99ರವರೆಗೆ ಮಾನ್ಯತೆ ಆಗದೆ ಇದ್ದ ಅವಧಿಯಲ್ಲಿ ಅನುದಾನ ನೀಡಿದ; ಮತ್ತು 1995-2001ರ ಅವಧಿಯಲ್ಲಿ ಅನುದಾನರಹಿತ ವಿಭಾಗಗಳ ಶಿಕ್ಷಕರಿಗೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡಿ ವಂಚಿಸಿದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಕ್ರಮ.

**ಓದಲಾಗಿದೆ:** ದಿನಾಂಕ:13.7.2004ರಸರ್ಕಾರಿ ಆದೇಶ ಸಂಖ್ಯೆ.ಇ ಡಿ 9 ಡಿಜಿಡಿ 2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ:13.7.2004ರ ಸರ್ಕಾರಿ ಆದೇಶದಲ್ಲಿ ಶಿಸ್ತು ಕ್ರಮ/ಕ್ರಿಮಿನಲ್ ಕ್ರಮ ಬಾಕಿಯಿರಿಸಿ,ಕೆಳಕಂಡ ಅಧಿಕಾರಿಗಳನ್ನು ಅಮಾನತ್ತಿನಲ್ಲಿ ಇಡಲಾಗಿದೆ:

1. ಶ್ರೀ ಪ್ರಭಾಕರ್, ಶಿಕ್ಷಣಾಧಿಕಾರಿ(ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ)
2. ಶ್ರೀ ಟಿ.ಸಿ.ಚಂದ್ರಯ್ಯ,ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾಶಿಇ ,ಬೆಂಗಳೂರು ಉತ್ತರ ಜಿಲ್ಲೆ, ಬೆಂಗಳೂರು
3. ಶ್ರೀಮತಿ ಬಿ.ಆರ್.ಶೈಲಕುಮಾರಿ, ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇ ಲಾಖೆ,ತುಮಕೂರು
4. ಶ್ರೀ ಬಿ.ರಾಮಾಂಜಯ್ಯ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕೂಡಿಗೆ, ಕೊಡಗು ಜಿಲ್ಲೆ
5. ಶ್ರೀ ಬಿ.ಸಿ.ವಸಂತಕುಮಾರ್, ಕ್ಷೇತ್ರ ಶಿಕ್ಷಣಾಧಿಕಾರಿ, ತುಮಕೂರು
6. ಶ್ರೀ ಸಯ್ಯದ್ ಖಲಂದರ್, ಕ್ಷೇತ್ರ ಶಿಕ್ಷಣಾಧಿಕಾರಿ, ಬೆಂಗಳೂರು ಉತ್ತರವಲಯ-2, ಬೆಂಗಳೂರು
7. ಶ್ರೀ ಹೆಚ್.ಡಿ.ಗೋವಿಂದಯ್ಯ, ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು-3.

ಸದರಿ ಸರ್ಕಾರಿ ಆದೇಶದ ಪ್ರಸ್ತಾವನೆಯ 2ನೇ ಕಂಡಿಕೆಯಲ್ಲಿ ಫೆಬ್ರವರಿ 1995 ರಿಂದ ಮಾರ್ಚ್ 2001ರವರೆಗೆ ಅನುದಾನರಹಿತವಾಗಿ ಮಂಜೂರಾಗಿದ್ದ 4 ವಿಭಾಗಗಳ 4 ಶಿಕ್ಷಕರಿಗೆ ವೇತನಾನುದಾನ ಬಿಡುಗಡೆ ಮಾಡಿದ ಆರೋಪ ಮಾತ್ರ ಉಲ್ಲೇಖಿಸಲಾಗಿದೆ. ಆದರೆ ಈ ಶಿಸ್ತು ಕ್ರಮ/ಕ್ರಿಮಿನಲ್ ಕ್ರಮವನ್ನು 1993-94ನೇ ಸಾಲಿನಿಂದ 1998-99ನೇ ಸಾಲಿನವರೆಗೆ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಇ ದು ಮಾನ್ಯತೆ ಆಗದ ಅವಧಿಗೆ ವೇತನ ಅನುದಾನ ನೀಡಿದ ಅಧಿಕಾರಿಗಳ ವಿರುದ್ದವೂ ಸಹ ಉದ್ದೇಶಿಸಲಾಗಿದೆ. ಸದರಿ ಅವಧಿಯಲ್ಲಿ ಕೆಳಕಂಡ ಅಧಿಕಾರಿಗಳು ಕೆಲಸ ನಿರ್ವಹಿಸಿದ್ದಾರೆ.

1. ಶ್ರೀ ಸೈಯದ್ ಖಲಂದರ್ - ದಿನಾಂಕ:27.5.92 ರಿಂದ 22.4.94ರವರೆಗೆ
2. ಶ್ರೀ ಹೆಚ್.ಡಿ.ಗೋವಿಂದಯ್ಯ - ದಿನಾಂಕ:22.4.94 ರಿಂದ 8.2.96ರವರೆಗೆ
3. ಶ್ರೀ ಪ್ರಭಾಕರ್ - ದಿನಾಂಕ:9.2.96 ರಿಂದ 23.7.97ರವರೆಗೆ
4. ಶ್ರೀ ಟಿ.ಸಿ.ಚಂದ್ರಯ್ಯ - ದಿನಾಂಕ:24.7.97 ರಿಂದ 10.7.2000ರವರೆಗೆ.

ಆದುದರಿಂದ ದಿನಾಂಕ:13.7.2004ರ ಮೇಲೆ ಓದಲಾಗಿರುವ ಸರ್ಕಾರಿ ಆದೇಶಕ್ಕೆ ಮಾರ್ಪಾಡು ಅಗತ್ಯವಿದೆ.

**ಸರ್ಕಾರದ ಆದೇಶ ಸಂಖ್ಯೆ.ಇ ಡಿ 9 ಡಿಜಿಡಿ 2003, ಬೆಂಗಳೂರು, ದಿನಾಂಕ: 23ನೇ ಜುಲೈ 2004**

ದಿನಾಂಕ:13.7.2004ರ ಸರ್ಕಾರಿ ಆದೇಶ ಸಂಖ್ಯೆಇ ಡಿ 9 ಡಿಜಿಡಿ 2003ರ ಆದೇಶ ಭಾಗದ ನಿಕಟಪೂರ್ವದಲ್ಲಿ, ಸದರಿ ಸರ್ಕಾರಿ ಆದೇಶದ ಪ್ರಸ್ತಾವನೆಯ ಕೊನೆಯ ಕಂಡಿಕೆಯಾಗಿ, ಕೆಳಕಂಡ ಪಠ್ಯವನ್ನು ಸೇರಿಸಿ ಓದಿಕೊಳ್ಳತಕ್ಕದ್ದು; ಮತ್ತು ಈ ಕೆಳಕಂಡ ಪಠ್ಯ ದಿನಾಂಕ:13.7.2004ರಂದೇ ಸದರಿ ಸರ್ಕಾರಿ ಆದೇಶಕ್ಕೆ ಸೇರಿಸಲ್ಪಟ್ಟಿದೆ ಎಂದು ಭಾವಿಸತಕ್ಕದ್ದು:

"93-94ನೇ ಸಾಲಿನಿಂದ 98-99ನೇ ಸಾಲಿನವರೆಗೆ ಮಾನ್ಯತೆ ಆಗದ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಇ ದಕ್ಕೆ ಅನುದಾನ ಬಿಡುಗಡೆಯಾಗಿದ್ದು, ಸದರಿ ಅವಧಿಯಲ್ಲಿ ಕೆಳಕಂಡ ಅಧಿಕಾರಿಗಳು ಸಂಬಂಧಪಟ್ಟ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರು ಸದರಿ ಅಕ್ರಮಕ್ಕೆ ಜವಾಬ್ದಾರರಾಗಿರುತ್ತಾರೆ;

| ಹೆಸರು | ಅವಧಿ |
|---|---|
| 1. ಶ್ರೀ ಸೈಯದ್ ಖಲಂದರ್ | - ದಿನಾಂಕ:27.5.92 ರಿಂದ 22.4.94 |
| 2. ಶ್ರೀ ಹೆಚ್.ಡಿ.ಗೋವಿಂದಯ್ಯ | - ದಿನಾಂಕ:22.4.94 ರಿಂದ 8.2.96 |
| 3. ಶ್ರೀ ಪ್ರಭಾಕರ್ | - ದಿನಾಂಕ:9.2.96 ರಿಂದ 23.7.97 |
| 4. ಶ್ರೀ ಟಿ.ಸಿ.ಚಂದ್ರಯ್ಯ | - ದಿನಾಂಕ:24.7.97 ರಿಂದ10.7.2000 |

ಮೇಲ್ಕಂಡ ಆರೋಪದ ವಿರುದ್ದವೂ ಶಿಸ್ತು ಕ್ರಮ/ಕ್ರಿಮಿನಲ್ ಕ್ರಮ ಬಾಕಿಯಿರಿಸಿ ಸಂಬಂಧಪಟ್ಟವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ತೀರ್ಮಾನಿಸಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್.ಸಂಬರಗಿ**

ಪಿ.ಆರ್. 774 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ (ಸೇವೆಗಳು-1,2)

**ವಿಷಯ:** ತುಮಕೂರು ಜಿಲ್ಲೆ ಮಲ್ಲಸಂದ್ರದ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ 1993-94ರಿಂದ 1998-99ರವರೆಗೆ ಮಾನ್ಯತೆ ಆಗದೆ ಇ ದ್ದ ಅವಧಿಯಲ್ಲಿ ಅನುದಾನ ನೀಡಿದ; ಮತ್ತು ಅನುದಾನರಹಿತ ವಿಭಾಗಗಳ ಶಿಕ್ಷಕರಿಗೆ ಸಂಬಂಧಿಸಿದಂತೆ 1995-2001ರ ಅವಧಿಯಲ್ಲಿ ಅನುದಾನ ಬಿಡುಗಡೆ ಮಾಡಿ ವಂಚಿಸಿದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಕ್ರಮ.

**ಓದಲಾಗಿದೆ:** 1. ದಿನಾಂಕ:13.7.2004ರ ಸರ್ಕಾರಿ ಆದೇಶ ಸಂಖ್ಯೆ.ಇ ಡಿ 9 ಡಿಜಿಡಿ 2003.
2. ದಿನಾಂಕ:13.7.2004ರ ಸರ್ಕಾರಿ ಆದೇಶ ಸಂಖ್ಯೆ.ಇ ಡಿ 9 ಡಿಜಿಡಿ 2003(I).

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ: 13.7.2004ರ ಸರ್ಕಾರಿ ಆದೇಶದಲ್ಲಿ, ತುಮಕೂರು ತಾಲ್ಲೂಕು ಮಲ್ಲಸಂದ್ರದ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ, ಅನುದಾನರಹಿತ ವಿಭಾಗಗಳಿಗೆ ನೇಮಕಗೊಂಡ ಶಿಕ್ಷಕರಿಗೆ ಅನುದಾನ ಬಿಡುಗಡೆ ಮಾಡಿದ ಆಪಾದನೆಯ ಮೇಲೆ, ಶಿಸ್ತು ಕ್ರಮ/ಕ್ರಿಮಿನಲ್ ಕ್ರಮ ಬಾಕಿಯಿರಿಸಿ, 7 ಜನ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ (2) ರಲ್ಲಿ ಓದಲಾಗಿರುವ ದಿನಾಂಕ: 13.7.2004ರ ಸರ್ಕಾರಿ ಆದೇಶದಲ್ಲಿ, ಸದರಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಸೆಕ್ಷನ್ 7(2)(ಎ) ರಡಿ ತನಿಖೆಗೆ ಲೋಕಾಯುಕ್ತರಿಗೆ ವಹಿಸಲಾಗಿದೆ.

ಆದರೆ ಸದರಿ 7 ಅಧಿಕಾರಿಗಳಲ್ಲಿ, 4 ಅಧಿಕಾರಿಗಳು 1993-94 ರಿಂದ 1998-99 ರವರೆಗೆ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಮಾನ್ಯತೆ ಆಗದೆ ಇರುವ ಅವಧಿಯಲ್ಲಿ ಅನುದಾನ ಬಿಡುಗಡೆ ಮಾಡಿರುವ ಅಕ್ರಮವನ್ನೂ ಸಹ ಎಸಗಿದ್ದಾರೆ. ವಿವರಗಳು ಕೆಳಕಂಡಂತಿವೆ:

| ಹೆಸರು | | ಅವಧಿ |
|---|---|---|
| 1. ಶ್ರೀ ಸೈಯದ್ ಖಲಂದರ್ | - | ದಿನಾಂಕ:27.5.92 ರಿಂದ 22.4.94 ರವರೆಗೆ |
| 2. ಶ್ರೀ ಹೆಚ್.ಡಿ.ಗೋವಿಂದಯ್ಯ | - | ದಿನಾಂಕ:22.4.94 ರಿಂದ 8.2.96 ರವರೆಗೆ |
| 3. ಶ್ರೀ ಪ್ರಭಾಕರ್ | - | ದಿನಾಂಕ:9.2.96 ರಿಂದ 23.7.97 ರವರೆಗೆ |
| 4. ಶ್ರೀ ಟಿ.ಸಿ.ಚಂದ್ರಯ್ಯ | - | ದಿನಾಂಕ:24.7.97 ರಿಂದ10.7.2000 ರವರೆಗೆ |

**ಸರ್ಕಾರಿ ಆದೇಶ ಸಂಖ್ಯೆ: ಇಡಿ 9 ಡಿಜಿಡಿ 2003(I), ಬೆಂಗಳೂರು, ದಿನಾಂಕ: 23ನೇ ಜುಲೈ 2004**

ಆದುದರಿಂದ ದಿನಾಂಕ: 13.7.2004ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 9 ಡಿಜಿಡಿ 2003(I)ನ್ನು ಮುಂದುವರಿಸುತ್ತಾ 1993-94ನೇ ಸಾಲಿನಿಂದ 1998-99ನೇ ಸಾಲಿನವರೆಗೆ ಶ್ರೀ ವಿಶ್ವಭಾರತಿ ಹಿರಿಯ ಪ್ರಾಥಮಿಕ ಶಾಲೆ, ಮಲ್ಲಸಂದ್ರ, ತುಮಕೂರು ತಾಲ್ಲೂಕು, ಮಾನ್ಯತೆಯಾಗದೆ ಅನುದಾನ ನೀಡಿದ ಅಕ್ರಮದ ಬಗ್ಗೆಯೂ ತನಿಖೆಗಾಗಿ ಮಾನ್ಯ ಕರ್ನಾಟಕ ಲೋಕಾಯುಕ್ತರಿಗೆ ಈ ಮೂಲಕ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್.ಸಂಬರಗಿ**

ಪಿ.ಆರ್. 775 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ (ಸೇವೆಗಳು-1,2)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ**: ತುರುವೇಕೆರೆ ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗದ ಉಗ್ರಾಣ ಕೊರತೆ ಶ್ರೀ ಡಿ.ಎನ್. ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ, ಇ ವರ ವಿರುದ್ಧ ಇ ಲಾಖಾ ವಿಚಾರಣೆ-ಅಂತಿಮ ಆದೇಶ-ಬಗ್ಗೆ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ, ಜಿಲ್ಲಾ ಪಂಚಾಯತ್, ತುಮಕೂರು ಇ ವರ ಪತ್ರ ಸಂ:ತುಜಿಪಂ,ಆ-ಎ(1) ಇ ಂ.ವಿವ-48/ 01-02 ದಿ.6-10-01.
2. ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 7 ಇ ಎನ್ ಕ್ಯೂ 02 ದಿ.12-11-03.
3. ಆದೇಶ ಸಂ:ಗ್ರಾಅಪ 7 ಇ ಎನ್ ಕ್ಯೂ 02 ದಿ.4-4-03.
4. ವಿಚಾರಣಾಧಿಕಾರಿಗಳ ದಿ.1-12-03ರ ವಿಚಾರಣಾ ವರದಿ.
5. 2ನೇ ಕಾರಣ ಕೇಳುವ ನೋಟಿಸ್ ಸಂ:ಗ್ರಾಅಪ 7 ಇ ಎನ್ ಕ್ಯೂ 02 ದಿ.25-3-04.
6. ಶ್ರೀ ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ, ಇ ವರ ದಿ.26-4-04ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ, ಜಿಲ್ಲಾ ಪಂಚಾಯತ್, ತುಮಕೂರು ಇ ವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ತುರುವೇಕೆರೆ ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗದಲ್ಲಿ 1988ರಿಂದ 1990ನೇ ಸಾಲಿನಲ್ಲಿ 5,42, 024-00ರೂ.ಗಳ ಉಗ್ರಾಣ ದಾಸ್ತಾನಿನಲ್ಲಿ ಕೊರತೆ ಕಂಡು ಬಂದಿತ್ತೆಂದು ಇ ದಕ್ಕೆ (1) ಶ್ರೀ ಎಂ.ನಂಜಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್, (2) ಶ್ರೀ ಪಾಂಡುರಂಗಪ್ಪ, ಅಂದಿನ ಪ್ರಥಮ ದರ್ಜೆ ಸಹಾಯಕ ಮತ್ತು (3) ಶ್ರೀ ಡಿ.ಎಸ್.ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ತುರುವೇಕೆರೆ ಇ ವರು ಕಾರಣರೆಂದು ತಿಳಿಸುತ್ತಾ ಸದರಿಯವರ ವಿರುದ್ಧ ಇ ಲಾಖಾ ವಿಚಾರಣೆ ಹೂಡಲು ಕರಡು ದೋಷರೋಪಣಾ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, (1) ಶ್ರೀ ಎಂ.ನಂಜಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್, (2)ಶ್ರೀ ಪಾಂಡುರಂಗಪ್ಪ, ಅಂದಿನ ಪ್ರಥಮ ದರ್ಜೆ ಸಹಾಯಕ ಮತ್ತು (3) ಶ್ರೀ ಡಿ.ಎಸ್.ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ ಇ ವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11ರ ರೀತ್ಯ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ.11-12-02ರ ಕಾರಣ ಕೇಳುವ ನೋಟಿಸ್ ನೊಂದಿಗೆ ಆರೋಪಪಟ್ಟಿ ಜಾರಿ ಮಾಡುವ ಮೂಲಕ ಇ ಲಾಖಾ ವಿಚಾರಣೆ ಹೂಡಿತ್ತು.

ಸರ್ಕಾರದಿಂದ ಜಾರಿಗೊಳಿಸಿದ್ದ ಆರೋಪಗಳಿಗೆ ಆಪಾದಿತರು ನಿಗದಿತ ಅವಧಿಯೊಳಗಾಗಿ ತಮ್ಮ ಮೇಲಿನ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸದೆ ಇ ರುವುದರಿಂದ, ಮತ್ತು ಆಪಾದಿತ ಅಧಿಕಾರಿ/ನೌಕರರು ಅಕ್ರಮವೆಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿದ್ದುದರಿಂದ ಪ್ರಕರಣದ ಸತ್ಯಾಸತ್ಯತೆ ಅರಿಯಲು ಸದರಿಯವರ ಮೇಲಿನ ಆರೋಪಗಳ ಬಗ್ಗೆ ವಿವರವಾದ ಜಂಟಿ ಇ ಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್.ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇ ವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ.1-12-03ರ ವಿಚಾರಣಾ ವರದಿಯನ್ನು ಸಲ್ಲಿಸಿ, ಆಪಾದಿತರ ಮೇಲಿನ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದರು.ಆದರೆ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ

ನಿಯಮ 11ಎರಂತೆ ಒಪ್ಪದೆ ತನ್ನದೆ ಆದ ನಿರ್ಣಯಗಳನ್ನು ದಾಖಲಿಸಿ, ಆಪಾದಿತರ ಮೇಲಿನ ಆರೋಪ ರುಜುವಾತಾಗುತ್ತದೆಂದು ತೀರ್ಮಾನಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ(5)ರಲ್ಲಿ ಆಪಾದಿತರಿಗೆ 2ನೇ ಕಾರಣ ಕೇಳುವ ನೋಟಿಸ್ ನ್ನು ಜಾರಿಗೊಳಿಸಿತ್ತು. ಆಪಾದಿತ ಶ್ರೀ ಡಿ.ಎಸ್.ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ ಇ ವರು 2ನೇ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ.26-4-04ರಲ್ಲಿ ನೀಡಿರುವ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ, ಅವುಗಳು ಸಮಂಜಸವೆಂದು ಕಂಡು ಬರುವುದಿಲ್ಲ ಹಾಗೂ ಅವರು ತಮ್ಮ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಆಧಾರಗಳನ್ನು ಸಹ ಒದಗಿಸದೆ ಇ ರುವುದರಿಂದ ಅವರ ಮೇಲೆ ಮಾಡಲಾದ ಆರೋಪಗಳು ರುಜುವಾತಾಗುತ್ತವೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿರ್ಣಯಿಸಿ, ಅವರಿಗೆ ಸೂಕ್ತ ದಂಡನೆ ವಿಧಿಸಲು ನಿರ್ಧರಿಸಿದೆ. ಮೂರು ಜನ ಆಪಾದಿತರ ಮೇಲಿನ ಆರೋಪ, ವಿಚಾರಣಾಧಿಕಾರಿಗಳ ಅಭಿಪ್ರಾಯ ಸದರಿ ಅಭಿಪ್ರಾಯದ ಬಗ್ಗೆ ಸರ್ಕಾರದ ನಿರ್ಣಯ ಈ ಕೆಳಕಂಡಂತಿದೆ.

**ಆರೋಪ:**

(1) ಶ್ರೀ ಎಂ.ನಂಜಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್, (2)ಶ್ರೀ ಪಾಂಡುರಂಗಪ್ಪ, ಅಂದಿನ ಪ್ರಥಮ ದರ್ಜೆ ಸಹಾಯಕ ಮತ್ತು (3) ಶ್ರೀ ಡಿ.ಎಸ್.ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ ಇ ವರುಗಳು 1988-90ರ ಅವಧಿಯಲ್ಲಿ ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ತುರುವೆಕೆರೆ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ. 5,42,024-00ಗಳ ಉಗ್ರಾಣ ಸಾಮಗ್ರಿ ಕೊರತೆಗೆ ಕಾರಣರಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಎಸಗಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುತ್ತಾರೆ.

**ವಿಚಾರಣಾಧಿಕಾರಿಗಳ ವರದಿ:**

ಪ್ರಾಸಿಕ್ಯೂಷನ್ ಪರವಾಗಿ ಆರೋಪಗಳನ್ನು ರುಜುವಾತು ಮಾಡಲು ಸಾಕ್ಷಿಗಳು ನೀಡಿರುವ ಹೇಳಿಕೆಯು ಸಹಾಯ ವಾಗುವುದಿಲ್ಲವೆಂದು ತಿಳಿಸುತ್ತಾ, ಆರೋಪಿತ ಅಧಿಕಾರಿಗಳ ವಿರುದ್ದ ಮಾಡಲಾಗಿರುವ ಆರೋಪವು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿರುತ್ತಾರೆ.

**ವಿಚಾರಣಾ ವರದಿಯ ಮೇಲೆ ಶಿಸ್ತು ಪ್ರಾಧಿಕಾರದ ನಿರ್ಣಯ.**

ಸರ್ಕಾರವು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರಂತೆ ವಿಚಾರಣಾ ವರದಿಯನ್ನು ಪರಿಶೀಲಿಸಿ, ಈ ಕೆಳಕಂಡ ಕಾರಣಗಳಿಂದಾಗಿ ವಿಚಾರಣಾ ವರದಿಯನ್ನು ಒಪ್ಪದೆ ಈ ಕೆಳಗಿನಂತೆ ತನ್ನದೇ ಆದ ನಿರ್ಣಯಗಳನ್ನು ದಾಖಲಿಸಿ, ಆಪಾದಿತರ ಮೇಲಿನ ಆರೋಪ ರುಜುವಾತಾಗುತ್ತದೆಂದು ನಿರ್ಣಯಿಸಿದೆ.

ವಿಚಾರಣೆಯಲ್ಲಿ ಉಗ್ರಾಣ ಸಾಮಗ್ರಿಗಳ ಕೊರತೆ ಕಂಡು ಬಂದಿದ್ದರು ಸಹ ಅದಕ್ಕಾಗಿ ಆಪಾದಿತರನ್ನು ಜವಾಬ್ದಾರರನ್ನಾಗಿಸಲು ಸಕಾಲದಲ್ಲಿ ಕ್ರಮ ಕೈಗೊಳ್ಳದಿರುವುದು ಕಂಡು ಬರುತ್ತದೆ. ಆದರೆ ದಾಖಲೆಗಳನ್ನು ಅವಗಾಹಿಸಿದಾಗ, ಈ ಉಗ್ರಾಣ ಕೊರತೆ ಕಂಡು ಬಂದಿರುವುದು ನಿಜವಾಗಿದ್ದರೂ ಸಹ ಅದಕ್ಕೆ ಆಪಾದಿತರನ್ನು ಜವಾಬ್ದಾರರನ್ನಾಗಿಸಲು ವಿಚಾರಣೆಯ ಸಮಯದಲ್ಲಿ ಸಾಧ್ಯವಾಗಿ ರುವುದಿಲ್ಲ. ದಾಖಲೆಗಳನ್ನು ಅವಗಾಹಿಸಿದಾಗ ಶ್ರೀ ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ ಇ ವರು ಉಗ್ರಾಣ ಕೊರತೆಗೆ ಕಾರಣರೆಂದು ಅವರಿಗೆ ತುರುವೆಕೆರೆ ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗದ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್‌ರವರು ಸಕಾಲದಲ್ಲಿ ಮೆಮೋ ನೀಡಿರುತ್ತಾರೆ. ಹಾಗೂ ಈ ಉದ್ದೇಶಕ್ಕಾಗಿ ಇ ವರನ್ನು ಸೇವೆಯಿಂದ ಅಮಾನತ್ತು ಗೊಳಿಸಿರುತ್ತಾರೆ. ಉಗ್ರಾಣದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ ಇ ವರು ನಿಯಮಾನುರೀತ್ಯ ಲೆಕ್ಕಪತ್ರಗಳನ್ನು ನಿರ್ವಹಿಸದಿರುವುದರಿಂದಲೇ ಒಟ್ಟು ರೂ.5,42,024-00ಗಳ ಉಗ್ರಾಣ ಸಾಮಗ್ರಿ ಕೊರತೆ ಕಂಡು ಬಂದಿರುತ್ತದೆ. ಈ ಪ್ರಕರಣದಲ್ಲಿ ಶ್ರೀ ನಂಜಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ತುರುವೆಕೆರೆ ಇ ವರಿಂದ ಪ್ರಭಾರವನ್ನು ವಹಿಸಿಕೊಂಡ ಅಧಿಕಾರಿಗೆ ಉಗ್ರಾಣದ ಕೊರತೆಯನ್ನು ತಕ್ಷಣ ಗಮನಕ್ಕೆ ತರದೆ ಇ ದ್ದುದರಿಂದ ಶ್ರೀ ಡಿ.ಎಸ್. ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ ಇ ವರನ್ನೇ ಜವಾಬ್ದಾರರನ್ನಾಗಿಸಿ ಬೇಕಾಗುತ್ತದೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿರ್ಣಯಿಸಿ, ಅವರಿಂದ ಉಂಟಾಗಿರುವ ಆರ್ಥಿಕ ನಷ್ಟವನ್ನು ವಸೂಲು ಮಾಡಲು ನಿರ್ಧರಿಸಿದೆ. ವಿಚಾರಣಾ ವರದಿಯಂತೆ ಶ್ರೀ ನಂಜಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇ ಂಜಿನಿಯರ್, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ತುರುವೆಕೆರೆ ಇ ವರ ಮೇಲೆ ಹೂಡಲಾಗಿದ್ದ ಆರೋಪಗಳು ರುಜುವಾತಾಗುವುದಿಲ್ಲವೆಂದು ಸರ್ಕಾರವು ನಿರ್ಣಯಿಸಿದೆ. ಮತ್ತೊಬ್ಬ ಆಪಾದಿತ ನೌಕರರಾದ ಶ್ರೀ ಪಾಂಡುರಂಗಪ್ಪ, ಅಂದಿನ ಪ್ರಥಮ ದರ್ಜೆ ಸಹಾಯಕ ಇ ವರು ನಿಧನ ಹೊಂದಿರುವುದರಿಂದ ಇ ವರ ಮೇಲಿನ ವಿಚಾರಣೆಯನ್ನು ಸಹ ಸರ್ಕಾರವು ಕೈಬಿಟ್ಟು, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 7 ಇ ಎನ್ ಕ್ಯೂ 02 ಬೆಂಗಳೂರು, ದಿನಾಂಕ: 7ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ.ಎಸ್.ಚೆಲುವಾಚಾರ್, ಅಂದಿನ ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ಉಪವಿಭಾಗ, ತುರುವೆಕೆರೆ ಇ ವರು ಸದರಿ ಉಪವಿಭಾಗದಲ್ಲಿ 1988ರಿಂದ 1990ನೇ ಸಾಲಿನಲ್ಲಿ ಉಗ್ರಾಣ ದಾಸ್ತಾನಿನಲ್ಲಿ ಕೊರತೆಗೆ ಕಾರಣರಾಗಿರುವರೆಂಬ ಸಾಬೀತಾದ ಆಪಾದನೆಗಳಿಗಾಗಿ ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ ರೂ.5,42,024-00(ಐದು ಲಕ್ಷದ ನಲವತ್ತೆರಡು ಸಾವಿರದ ಇ ಪ್ಪತ್ತ ನಾಲ್ಕು ರೂ.ಗಳು ) ಗಳನ್ನು ಅವರ ವೇತನದಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iv) ರಂತೆ ವಸೂಲು ಮಾಡಲು ಹಾಗೂ ನಿಯಮ 8(iii)ರಂತೆ ಅವರ ಮುಂದಿನ 5 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಶ್ರೀ ನಂಜಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಮೇಲೆ ಹೂಡಲಾಗಿದ್ದ ಆರೋಪಗಳು ರುಜುವಾತಾಗದಿರುವುದರಿಂದ ಅವರನ್ನು ದೋಷಮುಕ್ತರನ್ನಾಗಿಸಿದೆ. ಮತ್ತೊಬ್ಬ ಆಪಾದಿತ ನೌಕರರಾದ ಶ್ರೀ ಪಾಂಡುರಂಗಪ್ಪ, ಅಂದಿನ ಪ್ರಥಮ ದರ್ಜೆ ಸಹಾಯಕ ಇವರು ನಿಧನ ಹೊಂದಿರುವುದರಿಂದ ಇವರ ಮೇಲಿನ ವಿಚಾರಣೆಯನ್ನು ಕೈಬಿಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 744

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ ಸೋಲೂರು ಇಲ್ಲಿಗೆ ಹುದ್ದೆಗಳ ಸ್ಥಳಾಂತರ–ಅಧಿಕಾರಿ/ನೌಕರರನ್ನು ನೇಮಿಸುವ ಬಗ್ಗೆ.

**ಓದಿದೆ:** (1) ಸರ್ಕಾರದ ಆದೇಶ ಸಂಖ್ಯೆ: ವಾಕೈ 485 ರೇಸೇವಿ 2001, ದಿನಾಂಕ: 26.03.2002.

(2) ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 465 ರೇಸೇವಿ 2001, ದಿನಾಂಕ: 27.04.2002.

(3) ಸರ್ಕಾರದ ಪತ್ರ ಸಂಖ್ಯೆ: ವಾಕೈ 230 ರೇಸೇವಿ 2002, ದಿನಾಂಕ: 28.09.2002.

(4) ಸರ್ಕಾರದ ಆದೇಶ ಸಂಖ್ಯೆ: ವಾಕೈ 09 ರೇಸೇವಿ 2004, ದಿನಾಂಕ: 31.01.2004.

(5) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ 1(10) ಸಿ.ಪುರ/58/02–03, ದಿನಾಂಕ: 19.02.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು, ಸೋಲೂರು ಗ್ರಾಮದಲ್ಲಿ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆಯನ್ನು ಪ್ರಾರಂಭಿಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ತದನಂತರ ಮೇಲೆ ಓದಲಾದ (2) ಮತ್ತು (3)ರ ಆದೇಶಗಳಲ್ಲಿ ಅನ್ಯಕಾರ್ಯ ನಿಮಿತ್ತದ ಮೇಲೆ ಸದರಿ ರೇಷ್ಮೆ ಗೂಡಿನ ಮಾರುಕಟ್ಟೆಯಲ್ಲಿ ಕೆಲಸ ನಿರ್ವಹಿಸಲು ಈ ಕೆಳಕಂಡ ಅಧಿಕಾರಿ/ನೌಕರರುಗಳನ್ನು ನಿಯೋಜಿಸಲಾಗಿದೆ.

(1) ಶ್ರೀ ಡಿ.ಎಂ. ಅಂಜನೇಯಗೌಡ – ರೇಷ್ಮೆ ಸಹಾಯಕ ನಿರ್ದೇಶಕರು.
(2) ಶ್ರೀ ಎನ್. ರಾಮಪ್ಪ – ರೇಷ್ಮೆ ನಿರೀಕ್ಷಕರು.
(3) ಶ್ರೀ ಹೆಚ್.ಎನ್. ಉಮಾಶಂಕರ್ – ರೇಷ್ಮೆ ನಿರೀಕ್ಷಕರು.
(4) ಶ್ರೀ ಬಿ.ಟಿ. ಹಾಲಸ್ವಾಮಿ – ರೇಷ್ಮೆ ಪ್ರದರ್ಶಕರು.
(5) ಶ್ರೀ ಶಿವರುದ್ರಪ್ಪ – ರೇಷ್ಮೆ ಪ್ರದರ್ಶಕರು.
(6) ಶ್ರೀ ಆರ್. ಚೆಲುವೇಗೌಡ – ರೇಷ್ಮೆ ಪ್ರವರ್ತಕರು.
(7) ಶ್ರೀ ಎಂ. ಮಹದೇವಯ್ಯ – ರೇಷ್ಮೆ ಪ್ರವರ್ತಕರು.

ಮೇಲೆ ಓದಲಾದ (4)ರ ಆದೇಶದಲ್ಲಿ ಸೋಲೂರು ಗ್ರಾಮದ ರೇಷ್ಮೆ ಗೂಡು ಮಾರುಕಟ್ಟೆಯ ಕಾರ್ಯನಿರ್ವಹಣೆಗೆ ಹುದ್ದೆಗಳ ಅವಶ್ಯಕತೆ ಇದ್ದುದರಿಂದ ಈ ಕೆಳಗಿನಂತೆ ಹುದ್ದೆಗಳನ್ನು ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

| ಕ್ರಮ ಸಂಖ್ಯೆ | ಸ್ಥಳಾಂತರಿಸಲಾದ ಹುದ್ದೆ ಇದ್ದ ಸ್ಥಳ | ಹುದ್ದೆಗಳ ಸಂಖ್ಯೆ ಮತ್ತು ಪದನಾಮ |
|---|---|---|
| 1 | ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ, ಬೆಂಗಳೂರು. | 1 ರೇಷ್ಮೆ ಸಹಾಯಕ ನಿರ್ದೇಶಕ. |
| 2 | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ತುರುವೇಕೆರೆ (ಮೂಲತಃ ವಿಸ್ತರಣಾ ಹಾಗೂ ಬಾಕಿ ಸಾಕಾಣಿಕೆ ಕೇಂದ್ರ ಸೋಮವಾರ ಪೇಟೆ ಹುದ್ದೆ) | 1 ರೇಷ್ಮೆ ನಿರೀಕ್ಷಕ. |
| 3 | ಕೇಂದ್ರ ಕಛೇರಿ, ರೇಷ್ಮೆ ಇಲಾಖೆ. | 1 ಪ್ರಥಮ ದರ್ಜೆ ಸಹಾಯಕ. |
| 4 | ಸೋಲೂರು ವಲಯ | 1 ರೇಷ್ಮೆ ಪ್ರದರ್ಶಕ. |
| 5 | ತಾಂತ್ರಿಕ ಸೇವಾ ಕೇಂದ್ರ, ಕಬ್ಬಳ್ಳಿ. | 1 ಡಿ ವೃಂದದ ಹುದ್ದೆ. |

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಮೇಲೆ ಓದಲಾದ (5)ರ ಪತ್ರದಲ್ಲಿ ಈ ಮಾರುಕಟ್ಟೆಗೆ ಎರಡು ರೇಷ್ಮೆ ಪ್ರವರ್ತಕರ ಹುದ್ದೆಗಳೂ ಸಹ ಅವಶ್ಯವಿರುವುದರಿಂದ ಈ ಕೆಳಕಂಡ 2 ರೇಷ್ಮೆ ಪ್ರವರ್ತಕ ಹುದ್ದೆಗಳನ್ನು ಸ್ಥಳಾಂತರಿಸಲು ಕೋರಿರುತ್ತಾರೆ.

| | | |
|---|---|---|
| 1 | ರೇಷ್ಮೆ ಗೂಡಿನ ಮಾರುಕಟ್ಟೆ, ಹುಬ್ಬಳ್ಳಿ. | 1 ರೇಷ್ಮೆ ಪ್ರವರ್ತಕರು. |
| 2 | ಬೆಳಗಾಂ ಜಿಲ್ಲೆಯ ಕಮತ್ಯಾನಹಟ್ಟಿ ಚಾಕಿ ಸಾಕಾಣಿಕಾ ಕೇಂದ್ರ. | 1 ರೇಷ್ಮೆ ಪ್ರವರ್ತಕರು. |

ಸೋಲೂರು ರೇಷ್ಮೆ ಗೂಡಿನ ಮಾರುಕಟ್ಟೆಯಲ್ಲಿ ಅನ್ಯಕರ್ತವ್ಯದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳನ್ನು ಅವರುಗಳ ಮೂಲ ಸ್ಥಳದಿಂದ ವರ್ಗಾಯಿಸಿ ಹಾಲಿ ಕರ್ತವ್ಯ ನಿರ್ವಹಿಸುವ ಸ್ಥಳದಲ್ಲಿಯೇ ನೇಮಿಸಲು ಸರ್ಕಾರವು ತೀರ್ಮಾನಿಸಿದೆ.

ಆದುದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 09 ರೇಸೇವಿ 2004, ಬೆಂಗಳೂರು, ದಿನಾಂಕ: 13ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು, ಸೋಲೂರು ಗ್ರಾಮದ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆಗೆ ಎರಡು ರೇಷ್ಮೆ ಪ್ರವರ್ತಕ ಹುದ್ದೆಗಳನ್ನು ಈ ಕೆಳಗಿನಂತೆ ಸ್ಥಳಾಂತರಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಹುದ್ದೆಗಳನ್ನು ಸ್ಥಳಾಂತರಿಸಲು ಉದ್ದೇಶಿಸಿರುವ ಕಛೇರಿ | ಹುದ್ದೆಗಳ ಸಂಖ್ಯೆ ಮತ್ತು ಪದನಾಮ |
|---|---|---|
| 1 | ರೇಷ್ಮೆ ಗೂಡಿನ ಮಾರುಕಟ್ಟೆ, ಹುಬ್ಬಳ್ಳಿ. | 1 ರೇಷ್ಮೆ ಪ್ರವರ್ತಕರು. |
| 2 | ಚಾಕಿ ಸಾಕಾಣಿಕಾ ಕೇಂದ್ರ, ಕಮತ್ಯಾನಹಟ್ಟಿ, ಬೆಳಗಾಂ ಜಿಲ್ಲೆ. | 1 ರೇಷ್ಮೆ ಪ್ರವರ್ತಕರು. |

ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ಸೋಲೂರು ಇಲ್ಲಿ ಅನ್ಯ ಕರ್ತವ್ಯದ ಮೇಲೆ ಹಾಗೂ ಇತರೆಡೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳನ್ನು ಅವರುಗಳ ಮೂಲ ಸ್ಥಳದಿಂದ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿ ಸದರಿ ಮಾರುಕಟ್ಟೆಗೆ ಸ್ಥಳಾಂತರಿಸಲಾಗಿರುವ ಹುದ್ದೆಗಳಿಗೆ ಈ ಕೆಳಗಿನಂತೆ ಅವರ ಹೆಸರುಗಳ ಮುಂದೆ ಸೂಚಿಸಲಾದ ಹುದ್ದೆಗಳಿಗೆ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಮತ್ತು ಹಿಂದೆ ಕಾರ್ಯ ನಿರ್ವಹಿಸುತ್ತಿದ್ದ ಸ್ಥಳ<br>**ಶ್ರೀಯುತ** | ವರ್ಗಾಯಿಸಿ ನೇಮಿಸಿರುವ ಸ್ಥಳ |
|---|---|---|
| 1 | ಡಿ.ಎಂ. ಆಂಜನೇಯಗೌಡ,<br>ರೇಷ್ಮೆ ಸಹಾಯಕ ನಿರ್ದೇಶಕರು,<br>ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ವೀರೇಗೌಡನ ದೊಡ್ಡಿ. | ರೇಷ್ಮೆ ಸಹಾಯಕ ನಿರ್ದೇಶಕರು,<br>ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ,<br>ಸೋಲೂರು. |
| 2 | ಎನ್. ರಾಮಪ್ಪ,<br>ರೇಷ್ಮೆ ನಿರೀಕ್ಷಕರು, ಮಾದರಿ ಚಾಕಿ ಸಾಕಾಣಿಕೆ ಕೇಂದ್ರ,<br>ಸೋಲೂರು. | ರೇಷ್ಮೆ ನಿರೀಕ್ಷಕರು,<br>ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ,<br>ಸೋಲೂರು. |
| 3 | ಶಿವರುದ್ರಪ್ಪ,<br>ರೇಷ್ಮೆ ಪ್ರವರ್ತಕರು, ತಾಂತ್ರಿಕ ಸೇವಾ ಕೇಂದ್ರ, ಕುಣಿಗಲ್. | ರೇಷ್ಮೆ ಪ್ರದರ್ಶಕರು, ಸರ್ಕಾರಿ ರೇಷ್ಮೆ<br>ಗೂಡಿನ ಮಾರುಕಟ್ಟೆ, ಸೋಲೂರು. |
| 4 | ಎಸ್. ವಿಜಯ,<br>ಪ್ರಥಮ ದರ್ಜೆ ಸಹಾಯಕ, ಸರ್ಕಾರಿ ರೇಷ್ಮೆ ಗೂಡಿನ<br>ಮಾರುಕಟ್ಟೆ, ವೀರೇಗೌಡನದೊಡ್ಡಿ. | ಪ್ರಥಮ ದರ್ಜೆ ಸಹಾಯಕರು,<br>ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ,<br>ಸೋಲೂರು. |
| 5 | ಆರ್. ಚಲುವೇಗೌಡ,<br>ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಮಾಗಡಿ. | ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ<br>ಗೂಡಿನ ಮಾರುಕಟ್ಟೆ, ಸೋಲೂರು. |
| 6 | ಎಂ. ಮಹದೇವಯ್ಯ,<br>ರೇಷ್ಮೆ ಪ್ರವರ್ತಕರು, ರೇಷ್ಮೆ ಕೃಷಿ ಕ್ಷೇತ್ರ, ಮಾಗಡಿ. | ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ<br>ಗೂಡಿನ ಮಾರುಕಟ್ಟೆ, ಸೋಲೂರು. |
| 7 | ಡಿ. ಶ್ರೀನಿವಾಸಮೂರ್ತಿ,<br>ಡಿ ವೃಂದದ ನೌಕರ, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ,<br>ಮಾಗಡಿ. | ಡಿ ವೃಂದದ ಹುದ್ದೆ<br>ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ,<br>ಸೋಲೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 748

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ರೇಷ್ಮೆ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಗೆ 2004-05ನೇ ಸಾಲಿಗೆ ಅರ್ಧ ವಾರ್ಷಿಕ ವೆಚ್ಚಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ದಿನಾಂಕ: 05.06.2004ರ ಪತ್ರ ಸಂ:ಜಸಂಇ/ಜಸಂಯೋ/ಏಸಿಟಿ68/2004-05.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ:05.06.2004ರ ಪತ್ರದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ ಇವರು ಕರ್ನಾಟಕ ಸರ್ಕಾರವು ವಿಶ್ವಬ್ಯಾಂಕ್ ನೆರವಿನೊಂದಿಗೆ ಕೈಗೊಂಡಿರುವ ಕರ್ನಾಟಕ ಸಮುದಾಯಾಧಾರಿತ ಕೆರೆ ನಿರ್ವಹಣೆ ಯೋಜನೆಯು ದಿನಾಂಕ:08.07.2002ರಿಂದ ಕಾರ್ಯಾರಂಭವಾಗಿದ್ದು, ಯೋಜನೆಯ ಮೊದಲೆರಡು ವರ್ಷದ ಅವಧಿಯಲ್ಲಿ 108 ಕೆರೆಗಳ ಸಮಗ್ರ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕಾರ್ಯಕ್ರಮ ಹಾಕಿಕೊಳ್ಳಲಾಗಿತ್ತು. ಆ ಪೈಕಿ 83 ಕೆರೆಗಳ ಕಾಮಗಾರಿಗಳು ಪ್ರಗತಿಯಲ್ಲಿರುವುದಾಗಿ ಹಾಗೂ 2004-05ನೇ ಸಾಲಿನಲ್ಲಿ ಸುಮಾರು 540 ಕೆರೆಗಳನ್ನು ಪುನಶ್ಚೇತನಗೊಳಿಸುವ ಕಾರ್ಯಕ್ರಮ ಹಮ್ಮಿಕೊಂಡಿರುವುದಾಗಿ ತಿಳಿಸಿದ್ದಾರೆ.

ಸದರಿ ಸಂಘವು 2000-01ನೇ ಸಾಲಿನಿಂದ ಸರ್ಕಾರದಿಂದ ಬಿಡುಗಡೆಯಾದ ಅನುದಾನ, ಬ್ಯಾಂಕ್ ಉಳಿತಾಯ ಖಾತೆಯಿಂದ ಬಂದಿರುವ ಬಡ್ಡಿ ಹಣ ಹಾಗೂ ವರ್ಷವಾರು ವೆಚ್ಚಗಳನ್ನು ಸಲ್ಲಿಸಿದ್ದು, ವೆಚ್ಚದ ವಿವರಗಳು ಕೆಳಕಂಡಂತಿದೆ:

(ಮೊತ್ತ ಲಕ್ಷ ರೂ.ಗಳಲ್ಲಿ)

| ಕ್ರ. ಸಂ. | ವರ್ಷ | ಸರ್ಕಾರದಿಂದ ನಿಗದಿಪಡಿಸಿರುವ ಆಯವ್ಯಯ | ಸರ್ಕಾರದಿಂದ ಬಿಡುಗಡೆಯಾದ ಅನುದಾನ | ಇತರೆ ಸ್ವೀಕೃತಿಗಳು | ವಾರ್ಷಿಕ ವೆಚ್ಚ | ಉಳಿಕೆ ಮಾರ್ಚ್ ಅಂತ್ಯಕ್ಕೆ |
|---|---|---|---|---|---|---|
| 1 | 2000-01 | 222.00 | 125.00 | -- | 67.33 | 57.67 |
| 2 | 2001-02 | 1000.00 | 325.00 | 1.64 | 281.53 | 102.78 |
| 3 | 2002-03 | 4124.00 | 1488.00 | 6.51 | 967.30 | 629.99 |
| 4 | 2003-04 | 3143.46 | 1562.00 | 23.92 | 1043.80 | 1172.11 |
| 5 | 2004-05 (31.03.04) | 9652.53 | - | - | 105.77 (ದಿ:31.04.04ಕ್ಕೆ ಅಂತ್ಯಕ್ಕೆ) | - |

2004-05ನೇ ಸಾಲಿನಲ್ಲಿ ಜಲಸಂವರ್ಧನೆ ಯೋಜನಾ ಸಂಘದ ಕಾರ್ಯಚಟುವಟಿಕೆಗಳಿಗಾಗಿ ಮೊದಲನೇ ಅರ್ಧವಾರ್ಷಿಕಕ್ಕೆ ವಿವಿಧ ಕಾರ್ಯಕ್ರಮದಡಿಯಲ್ಲಿ ಮಾಡಲು ಉದ್ದೇಶಿಸಿರುವ ವೆಚ್ಚದ ವಿವರಗಳು ಕೆಳಕಂಡಂತಿದೆ:

| ಕ್ರ.ಸಂ | ಉದ್ದೇಶಿತ ಕಾರ್ಯಕ್ರಮದ ವಿವರ | ಬೇಕಿರುವ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಟ್ಯಾಂಕ್ ಪದ್ಧತಿ ಉಪಯೋಜನೆ | 1600.00 |
| 2 | ಸರಕು ಮತ್ತು ಸಾಮಗ್ರಿಗಳು | 51.00 |
| 3 | ಸಲಹೆಗಾರರ ಸಂಭಾವನೆ | 99.00 |
| 4 | ಸರ್ಕಾರೇತರ ಸಂಸ್ಥೆಗಳು, ಶಿಕ್ಷಣ ಹಾಗೂ ಸಂಶೋಧನಾ ಸಂಸ್ಥೆಗಳು | 625.00 |
| 5 | ತರಬೇತಿ ಮತ್ತು ಕಾರ್ಯಾಗಾರ | 110.00 |
| 6 | ವೇತನಗಳು ಕಾರ್ಯಾಚರಣೆ ಹಾಗೂ ನಿರ್ವಹಣೆ | 315.00 |
| | ಒಟ್ಟು ಮೊತ್ತ: | **2800.00** |

ಈ ಯೋಜನೆಯ ಕಾರ್ಯಚಟುವಟಿಕೆಗಳಿಗಾಗಿ 2004-05ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ ರೂ.9652.53ಲಕ್ಷ ಗಳನ್ನು ಒದಗಿಸಲಾಗಿದ್ದು, ಮೇಲಿನ ಉದ್ದೇಶಿತ ವೆಚ್ಚಕ್ಕಾಗಿ 2004-05ನೇ ಸಾಲಿಗೆ ಬೇಕಾಗಿರುವ ಅನುದಾನ ರೂ.2800.00ಲಕ್ಷ ಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ:ಸನೀಇ 01 ಜಸಂಯೋ 2002, ಬೆಂಗಳೂರು, ದಿನಾಂಕ: 15ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಜಲಸಂವರ್ಧನೆ ಯೋಜನಾ ಸಂಘವು ಉದ್ದೇಶಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಸಲುವಾಗಿ 2004-05ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ ಒದಗಿಸಿರುವ ಅನುದಾನದಲ್ಲಿ ಅರ್ಧವಾರ್ಷಿಕ ವೆಚ್ಚಕ್ಕಾಗಿ ರೂ.2800.00ಲಕ್ಷಗಳನ್ನು (ಎರಡು ಸಾವಿರದ ಎಂಟುನೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ.

ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ, ಬೆಂಗಳೂರು ರವರು ಸಲ್ಲಿಸುವ ಹಣ ಸಂದಾಯ ಸ್ವೀಕೃತಿಯ ಮೇಲೆ ಮೇಲುರುಜು ಮಾಡಲು ವಿಶೇಷ ಕರ್ತವ್ಯಾಧಿಕಾರಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರಿಗೆ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ:06.07.2004ರ ಟಿಪ್ಪಣಿ ಸಂ:ಲೋಇ 682 ಅಕೋ-1/2004ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 752 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).